# ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್ ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕರು

ಹರೀಶ.ಕೆ

ನೋಂದಣಿ ಸಂಖ್ಯೆ : ೧೫೦೧೦೮೦೩೦೦೭





ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಪ್ರಾಧ್ಯಾಪಕರು





ಸಮಾಜವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬


೨೦೧೫-೧೬

# ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್ ಪದವಿಗೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು

**ಹರೀಶ.ಕೆ**

ನೋಂದಣಿ ಸಂಖ್ಯೆ : ೧೫೦೧೦೮೦೩೦೦೭೯

ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಪ್ರಾಧ್ಯಾಪಕರು




ಸಮಾಜವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೫-೧೬

# ಸಂಶೋಧಕರ ಪ್ರಮಾಣ ಪತ್ರ

**'ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ'** ಎಂಬ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ, ಪ್ರಾಧ್ಯಾಪಕರಾದ **ಡಾ. ವಾಸುದೇವ ಬಡಿಗೇರ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.


ಸಂಶೋಧಕರು
Harisha, K
**ಹರೀಶ.ಕೆ**
ಎಂ.ಫಿಲ್ ಸಂಶೋಧನಾ ವಿದ್ಯಾರ್ಥಿ
**ಪ್ರಾಚೀನ ಇತಿಹಾಸ ಮತ್ತು**
**ಪುರಾತತ್ವ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬


ಸ್ಥಳ : ವಿದ್ಯಾರಣ್ಯ
ದಿನಾಂಕ :

# ಮಾರ್ಗದರ್ಶಕರ ದೃಢೀಕರಣ ಪತ್ರ

**ಹರೀಶ.ಕೆ** ಇವರು ಎಂ.ಫಿಲ್ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **'ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ'** ಎಂಬ ಈ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ವಾಸುದೇವ ಬಡಿಗೇರ**
ಪ್ರಾಧ್ಯಾಪಕರು
**ಪ್ರಾಚೀನ ಇತಿಹಾಸ ಮತ್ತು**
**ಪುರಾತತ್ವ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ :

## ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

ಪ್ರಸ್ತಾವನೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಅಧ್ಯಯನದ ಸ್ವರೂಪ

೧.೫ ಅಧ್ಯಯನದ ಸಮೀಕ್ಷೆ

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ ಮತ್ತು ಸಮೀಕ್ಷೆ

## ಪ್ರಸ್ತಾವನೆ

ಮಾನವನು ಭೂಮಿಯ ಮೇಲೆ ಕಾಣಿಸಿಕೊಂಡ ಬಳಿಕ ಆರಂಭದಲ್ಲಿ ಅಲೆಮಾರಿಯಾಗಿ ಜೀವನವನ್ನು ಸಾಗಿಸುತ್ತಿದ್ದ. ನಂತರ ದಿನಗಳಲ್ಲಿ ಒಂದೇ ಕಡೆ ಶಾಶ್ವತವಾಗಿ ನೆಲೆಸದೆ ತನಗೆ ಅನುಕೂಲಕರವಾದ ಪ್ರದೇಶದಲ್ಲಿ ಅಲೆಮಾರಿಯಾಗಿ ಅಲ್ಲಲ್ಲಿ ಸುತ್ತಮುತ್ತ ಸಿಗುತ್ತಿದ್ದ ಪ್ರಾಣಿಗಳ ಹಸಿಮಾಂಸ, ಗೆಡ್ಡೆ–ಗೆಣಸುಗಳನ್ನು ತಿಂದು ತಾತ್ಕಾಲಿಕವಾಗಿ ಗುಹೆಗಳಲ್ಲಿ ಮರದ ಪೊಟರೆಗಳಲ್ಲಿ ಆಶ್ರಯ ಪಡೆದು ಜೀವನ ಸಾಗಿಸುತ್ತಿದ್ದನು. ಆ ಬಳಿಕ ಒಂದೆಡೆ ಶಾಶ್ವತವಾಗಿ ನೆಲೆನಿಂತು ತನಗೆ ಬೇಕಾದ ಆಹಾರ ಬೆಳೆಗಳನ್ನು ತಾನೇ ಬೆಳೆದು ತಿನ್ನಲು ಪ್ರಾರಂಭಿಸಿದನು. ಇದು ಮಾನವನ ಬೇಟೆ ಸಂಸ್ಕೃತಿಯು ಕೃಷಿ ಸಂಸ್ಕೃತಿಯಾಗಿ ಹಾಗೂ ಅಲೆಮಾರಿ ಸಂಸ್ಕೃತಿಯು ಗ್ರಾಮಸಂಸ್ಕೃತಿಯಾಗಿ ವಿಕಾಸವಾದುದನ್ನು ಸೂಚಿಸುತ್ತದೆ. ಮಾನವನ ಸಂಸ್ಕೃತಿಯು ಎಲ್ಲಿಯವರೆಗೆ ತಿಳಿಯಬೇಕೆಂಬ ಹಂಬಲವಿರುತ್ತದೆಯೂ ಅಲ್ಲಿಯವರೆಗೂ ಸಂಶೋಧನೆ, ಅನ್ವೇಷಣೆ ವ್ಯರ್ಥವಾಗುವುದಿಲ್ಲ. ಹಿದಿನಿಂದಲೂ ಬೆಳೆದುಬಂದಿದ್ದ ಸಂಸ್ಕೃತಿಯೆಂದು ಅರ್ಥೈಸುವ ಪರಂಪರೆಯ ಜೊತೆಗೆ ಪ್ರತಿಕಾಲಘಟ್ಟದಲ್ಲೂ ಪರಿವರ್ತನೆಯ ಅಗೋಚರಶಕ್ತಿ ಕೈಚಾಚಿ ಕಳುಹಿಸಿಕೊಡುತ್ತಿರುತ್ತದೆ. ಯಾವುದೇ ಪ್ರಬಲವಾದ ಒತ್ತಡಕ್ಕೆ ಸಂಸ್ಕೃತಿಯು ಏಕಕಾಲಕ್ಕೆ ಒಳಪಡುವುದಿಲ್ಲ. ಹಾಗೂ ಸಂಪೂರ್ಣವಾಗಿ ಬದಲಾಗಿರುವುದಿಲ್ಲ.

ಪ್ರಕೃತಿಯ ಪ್ರಭಾವಗಳಿಂದ ಮಾನವನ ನಾಗರೀಕತೆಯು ಕೂಡ ನಿಸರ್ಗದಲ್ಲಿಯೇ ಆರಂಭವಾಗಿದೆ. ಶ್ರೀಕಂಠಶಾಸ್ತ್ರಿ ಎಸ್. ಅವರು ಹೇಳುವಂತೆ ಸಂಸ್ಕೃತಿಯು ಆಂಗ್ಲಭಾಷೆಯ ಕಲ್ಚರ್ ಪದಕ್ಕೆ ಸಮನಾಗಿ ಸಂಸ್ಕೃತಿ ಪದವನ್ನು ಬಳಸಲಾಗಿದೆ. ಇದಕ್ಕೆ ನಿರ್ಧಿಷ್ಟವಾದ ಅರ್ಥ ಕೊಡುವುದು ಕಷ್ಟದಾಯಕ. ಚಿದಾನಂದ ಮೂರ್ತಿ ಎಂ. ಅವರು ಹೇಳುವಂತೆ ಮನುಷ್ಯನಲ್ಲಿನ ಮೃಗತ್ವವನ್ನು ಅಳಿಸಿ ಅಲ್ಲಿ ನಿಜವಾದ ಮಾನವೀಯತೆಯನ್ನು ಆರಂಭಿಸುವುದೇ ಸಂಸ್ಕೃತಿ. ಇದು ವರಧಾನವಾಗಿ ಮಾನವನ ಅಂತರಂಗದ ವಿಕಸನಕ್ಕೆ ಸಂಬಂಧಿಸಿದೆ. ಅವರೇ ಮತ್ತೊಂದು ಕಡೆ 'ಜನತೆಯ ಧರ್ಮ, ಮೌಲ್ಯ, ಕಲೆಗಳು, ಸಾಹಿತ್ಯ, ಸಾಮಾಜಿಕ ಆಚರಣೆ, ರಾಜಕೀಯ ಜೀವನ, ಉಡುಗೆ ತೊಡುಗೆ ಆಹಾರ ವಿಧಾನಗಳು, ಆರ್ಥಿಕ ಸ್ಥಿತಿಗತಿಗಳು, ಕೃಷಿ ವ್ಯವಸಾಯ ಇತ್ಯಾದಿಗಳನ್ನು ಸಂಸ್ಕೃತಿಯು ಒಳಗೊಳ್ಳುತ್ತದೆ' ಎಂದು ಹೇಳಿದ್ದಾರೆ.

ನಾಗರೀಕತೆ ಭೌತಿಕ ಸಂಪತ್ತನ್ನು ಪ್ರತಿನಿಧಿಸಿದ್ದು ಪ್ರಧಾನವಾಗಿ ಬಾಹ್ಯ ಜೀವನವನ್ನು ಅವಲಂಬಿಸಿದೆ. ಅದೇ ರೀತಿ ವ್ಯಕ್ತಿಯ ಆಚಾರ-ವಿಚಾರ, ಧರ್ಮ, ಸಾಹಿತ್ಯ, ಕಲೆಗಳಲ್ಲಿ ವ್ಯಕ್ತಿಯ ಸ್ವಭಾವವು ಸಂಸ್ಕೃತಿಯಾಗಿರುತ್ತದೆ. ಒಟ್ಟಿನಲ್ಲಿ ಸಂಸ್ಕೃತಿಯು ಮಾನವನ ಸಮಗ್ರ ಜೀವನ ವಿಧಾನವನ್ನು ತಿಳಿಸುತ್ತದೆ. ಒಂದು ಪ್ರದೇಶದ ಇತಿಹಾಸವು ಆ ಪ್ರದೇಶವನ್ನಾಳಿದ ಆಡಳಿತಗಾರರ ಸಾಮ್ರಾಜ್ಯದ ವರ್ಣನೆ ಎಂದು ಭಾವಿಸಲಾಗಿತ್ತು. ಆದರೆ ಕೆಲವು ದಶಕಗಳಿಂದ ಈಚೆಗೆ ಸ್ಥಳೀಯ ಚರಿತ್ರೆಗೆ ಹೆಚ್ಚು ಮಹತ್ವ ನೀಡಿ ಅಧ್ಯಯನ ಮಾಡಲಾಗುತ್ತಿದೆ. ಇಂದು ಸ್ಥಳೀಯ ಚರಿತ್ರೆಗಳಲ್ಲಿ ಗ್ರಾಮ, ಹೊಬಳಿ, ತಾಲೂಕು ಹಾಗೂ ಜಿಲ್ಲಾಮಟ್ಟಗಳಲ್ಲಿ ಸಂಶೋಧನೆ ಅಧ್ಯಯನಗಳು ನಡೆಯುತ್ತಿವೆ. ಇಂತಹ ಸಂಶೋಧನಾ ಅಧ್ಯಯನಗಳು ಸ್ಥಳಿಯ ಚರಿತ್ರೆಯಲ್ಲಿ ಮಹತ್ವ ಪೂರ್ಣವಾದ ಹೆಜ್ಜೆಗುರುತುಗಳಾಗಿವೆ. ಸ್ಥಳೀಯ ಚರಿತ್ರೆ ಅಧ್ಯಯನದಲ್ಲಿ ರಾಜಕೀಯ ಇತಿಹಾಸದ ಜೊತೆಗೆ ಅಂದಿನ ಸಾಂಸ್ಕೃತಿಕ ಬದುಕಿನ ಅಧ್ಯಯನಕ್ಕೆ ಮಹತ್ವ ಕೊಡಲಾಗಿದೆ. ಆ ಪ್ರದೇಶದಲ್ಲಿ ಬದುಕಿ ಬಾಳಿದ ಮಾನವನ ಜೀವನಮೌಲ್ಯಗಳು ಇತ್ಯಾದಿಗಳು ಮಾನವನ ಸಾಂಸ್ಕೃತಿಕ ಅಧ್ಯಯನವಾಗಿದೆ ಎಂದು ಹೇಳಬಹುದು. ಪ್ರಸ್ತುತ ದಾವಣಗರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನ ಕೈಗೊಂಡು ಇಡೀ ದಾವಣಗೆರೆ ಕಸಬಾ ಪರಿಸರದ ಚರಿತ್ರೆ ಮತ್ತು ಸಂಸ್ಕೃತಿಯ ಸಾಮಾಜಿಕ ಮತ್ತು ವೈಜ್ಞಾನಿಕವಾದ ವಸ್ತುನಿಷ್ಟ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಮಧ್ಯ ಕರ್ನಾಟಕದ ಕೇಂದ್ರ ಭಾಗವಾಗಿರುವ ದಾವಣಗೆರೆ ಜಿಲ್ಲೆಯ ಪ್ರಾಗಿತಿಹಾಸಿಕ, ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾದ ಮಹತ್ವವನ್ನು ಪಡೆದಿದೆ. ದಾವಣಗೆರೆ ತಾಲೂಕಿನಲ್ಲಿ ೩ ಹೋಬಳಿಗಳಿದ್ದು ಅವುಗಳಲ್ಲಿ ಕಸಬಾ ಹೋಬಳಿಯು ಕೂಡ ಒಂದಾಗಿದೆ. ದಾವಣಗೆರೆ ಕಸಬಾ ಹೊಬಳಿಯು ಭೌಗೋಳಿಕವಾಗಿ ವೈಶಿಷ್ಟತೆಯನ್ನು ಹೊಂದಿದೆ. ಇದು ಬಯಲು ಸೀಮೆಯೂ ಅಲ್ಲ, ಅತ್ತ ಮಲೆನಾಡು ಅಲ್ಲದ ಅರೆಮಲೆನಾಡಿನ ಪ್ರದೇಶವಾಗಿದ್ದು ಅತ್ಯಂತ ಉಪಯುಕ್ತವಾದ ವಾಸಯೋಗ್ಯವಾದ ಪ್ರದೇಶವಾಗಿದೆ. ಯಾವುದೇ ಒಂದು ಪ್ರದೇಶದ ಅಥವಾ ಸ್ಥಳದ ಸಾಂಸ್ಕೃತಿಕ ಪರಂಪರೆ ಅಲ್ಲಿಯ ಜನರ ಚಟುವಟಿಕೆಗಳನ್ನು ಶ್ರೀಮಂತಗೊಳಿಸುವಲ್ಲಿ ಮುಖ್ಯ ಪಾತ್ರವಹಿಸುತ್ತದೆ. ಆದ್ದರಿಂದ ಆಯಾ ಪ್ರದೇಶಗಳ ವಿಶಿಷ್ಟ ಸಾಂಸ್ಕೃತಿಕ ಪರಂಪರೆ ಮತ್ತು ಇತಿಹಾಸವನ್ನು ಮುಂದಿನ ಪೀಳಿಗೆಗಾಗಿ ಕಾಪಾಡಿಕೊಂಡು ಬರಲು ಸ್ಥಳೀಯ ಜನತೆಯ ಜೀವನ ಮಟ್ಟವನ್ನು ಸಕ್ರೀಯವಾಗಿ ಭಾಗವಹಿಸಿರುವುದನ್ನು ತಿಳಿಸುವುದು ಅವಶ್ಯಕವಾಗಿದೆ. ಸಾಂಸ್ಕೃತಿಕ ಪರಂಪರೆ ಎಂಬ ಪದದ ಅರ್ಥವ್ಯಾಪ್ತಿ ಪೀಳಿಗೆಯಿಂದ ಪೀಳಿಗೆಗೆ ಸಾಗಿಬರುವ ಮೌಲಿಕವಾದ ಸ್ಥಳ, ಸ್ಮಾರಕ, ವಸ್ತು ಮತ್ತು ವಿಷಯಗಳು ತಿಳಿಯುವುದಾಗಿದೆ. ಪರಂಪರೆ ವಂಶಾನುಕ್ರಮವಾಗಿ ಪ್ರಾಪ್ತವಾಗುವ ಪಿತ್ರಾರ್ಜಿತ ಸ್ವತ್ತು ಅಥವಾ ಆಸ್ತಿ ಎಂಬ ಅರ್ಥವನ್ನು ಹೊಂದಿದೆ.

ದಾವಣಗೆರೆ ಕಸಬಾ ಪರಿಸರದ ಸುತ್ತಮುತ್ತ ಪ್ರದೇಶಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅವಶೇಷ ಹಾಗೂ ನೆಲೆಗಳು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ. ಆದಿ ಹಳೇಶಿಲಾಯುಗ, ಸೂಕ್ಷ್ಮಶಿಲಾಯುಗ, ನೂತನಶಿಲಾಯುಗ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಅಲ್ಪ ಪ್ರಮಾಣದಲ್ಲಿವೆ. ಈ ಪರಿಸರದ ಪಕ್ಕದಲ್ಲಿಯೇ ನ್ಯಾಮತಿ, ಲಿಂಗದಹಳ್ಳಿ, ಗೋವಿನಕೋವಿ ಆದಿ ಹಳೇ ಶಿಲಾಯುಗಕ್ಕೆ  ಸಂಬಂದಿಸಿದ ನೆಲೆಗಳನ್ನು ಕಾಣಬಹುದು. ಹಾಗಾಗಿ ಈ ಪರಿಸರದ ಪ್ರದೇಶಗಳು ಪ್ರಾಗ್ ಇತಿಹಾಸದ ಕಾಲದ ವಸತಿ ನೆಲೆಗಳ ಸಂಪರ್ಕಹೊಂದಿದ್ದವು. ಚಾರಿತ್ರಿಕ ಕಾಲಘಟ್ಟದಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಳುಕ್ಯರು, ರಾಷ್ಟ್ರಕೂಟರು, ನೊಳಂಬರು, ಉಚ್ಚಂಗಿ ಪಾಡ್ಯರು, ಹೊಯ್ಸಳರು, ವಿಜಯನಗರ ಅರಸರು, ಚಿತ್ರದುರ್ಗ ಪಾಳೆಯಗಾರರು, ನವಾಬರು, ಮೈಸೂರು ಒಡೆಯರು, ಬ್ರಿಟಿಷರು ಮುಂತಾದವರು ಅಳ್ವಿಕೆ ನಡೆಸಿರುವ ಕುರುಹುಗಳು ಈ ಭಾಗಗಳಲ್ಲಿ ಗೋಚರಿಸುತ್ತವೆ. ಕ್ರಿ.ಶ ೧೦೬೬ ಬೇಲ್ಲೂರು ೧೨ ಅಗಿದ್ದಿತೆಂದು ದಾವಣಗೆರೆ ಶಾಸನದಿಂದ ತಿಳಿದುಬರುತ್ತದೆ. ದಾವಣಗೆರೆ ೧೨ನೇ ಶತಮಾನದಿಂದ ಕಲ್ಯಾಣ ಚಾಲುಕ್ಯರ ನೆಲೆಗಳಲ್ಲಿ ಒಂದಾಗಿತ್ತು, ೧೨-೧೨ನೇ ಶತಮಾನದಿಂದಲೂ ಶಾಸನಗಳಲ್ಲಿ ಈ ನಾಡನ್ನು ವರ್ಣಿಸಿದೆ. ಶತಮಾನದಲ್ಲಿ ಉಚ್ಚಂಗಿದುರ್ಗವು ಪಾಂಡ್ಯರ ಪ್ರಮುಖ ಕೇಂದ್ರ ದೊಡ್ಡ ಪಟ್ಟಣ ಆನೆಕೊಂಡ ಪ್ರದೇಶವಾಗಿತ್ತು ಎಂದೂ ಪಾಂಡ್ಯರ, ಚಾಲುಕ್ಯರ, ಹೊಯ್ಸಳರ ಶಾಸನಗಳಲ್ಲಿ ದೊರೆಯುತ್ತವೆ.

ಸಾಂಸ್ಕೃತಿಕ ಚರಿತ್ರೆಯ ನಿರ್ಮಾಣದಲ್ಲಿ ಸ್ಮಾರಕಗಳು ಅಮೂಲ್ಯವಾದ ಪಾತ್ರವನ್ನುವಹಿಸುತ್ತದೆ. ಸ್ಮಾರಕಗಳಲ್ಲಿ ದೇವಾಲಯ, ಕೋಟೆ-ಕೊತ್ತಲು, ಅರಮನೆ, ಕೆರೆಕಟ್ಟೆ ಮುಂತಾದವುಗಳನ್ನು ಕಾಣಬಹುದು. ದಾವಣಗೆರೆ ಕಸಬಾ ಪರಿಸರದಲ್ಲಿ ಏಲೆ ಬೇತೂರು, ಆನೆಕೊಂಡ, ಶಾಮನೂರು, ಕಾಡ್ಲೆಬಾಳು, ಅವರಗೊಳ್ಳ, ಕುಂದುವಾಡ, ಕಾಡಜ್ಜಿ, ಹಳೇಬಾತಿ, ಬಲ್ಲೂರು, ಹದಡಿ, ಗಂಡಮುಕ್ತನಹಳ್ಳಿ, ತುರ್ಚಘಟ್ಟ, ಹಲವು ಪ್ರದೇಶಗಳಲ್ಲಿ ರಾಷ್ಟ್ರಕೂಟರ ಕಾಲದಿಂದ ವಿಜಯನಗರೋತ್ತರ ಕಾಲದವರೆಗಿನ ದೇವಾಲಯಗಳಿವೆ. ದಾವಣಗೆರೆ ಕಸಬಾ ಪರಿಸರದಲ್ಲಿರುವ ಗ್ರಾಮಗಳಲ್ಲಿ ಪಾಳೆಗಾರರ, ಉಚ್ಚಂಗಿ ಪಾಂಡ್ಯರ, ವಿಜಯನಗರ ಮತ್ತು ಇತರೆ ಕಾಲದ ಶಾಸನಗಳು, ದೇವಾಲಯಗಳು, ಕೋಟೆ-ಕೊತ್ತಲಗಳು ಮತ್ತು ಕರೆ-ಕಟ್ಟೆಗಳಿವೆ. ಕೆರೆ-ಕಟ್ಟೆಗಳು ಮಾನವನ ಆರ್ಥಿಕ ಜೀವನದ ಬೆನ್ನೆಲುಬುವಾಗಿದ್ದವು. ಅವುಗಳಲ್ಲಿ ಇಂದಿಗೂ ಬಳಕೆಯಾಗುತ್ತಿರುವುದು ಅಂದಿನ ವಾಸ್ತು ರಚನೆಗೆ ತಾಂತ್ರಿಕ ಕೌಶಲಕ್ಕೆ ಸಾಕ್ಷಿಯಾಗಿದೆ. ಇಲ್ಲಿನ ಶಿಲ್ಪ ಸಂಪತ್ತು ಆಪಾರವಾಗಿದೆ. ಶಿಲ್ಪಗಳಲ್ಲಿ ಮೂರ್ತಿಶಿಲ್ಪಗಳು ಹಾಗೂ ಸ್ಮಾರಕ ಶಿಲ್ಪಗಳು ಕಂಡುಬರುತ್ತವೆ. ಚಾಲುಕ್ಯರ, ಉಚ್ಚಂಗಿ ಪಾಂಡ್ಯರ, ಹೊಯ್ಸಳರ, ವಿಜಯನಗರ ಹಾಗೂ ವಿಜಯನಗರೋತ್ತರ ಶೈಲಿಯ ಮೂರ್ತಿಶಿಲ್ಪಗಳು ಈ ಪರಿಸರದ ದೇವಾಲಯಗಳಲ್ಲಿವೆ. ಸ್ಮಾರಕ ಶಿಲ್ಪಗಳಲ್ಲಿ ವೀರಗಲ್ಲು, ಮಹಾಸತಿಗಲ್ಲು ಹಾಗೂ ನಿಷಿಧಿಗಲ್ಲುಗಳು ಮುಖ್ಯವಾಗಿವೆ.

ಈ ಪರಿಸರದ ಶಾಸನ ಸಂಪತ್ತು, ದಾವಣಗೆರೆ ಕಸಬಾ ಪ್ರದೇಶದ ಸ್ಥಳನಾಮ, ಚಾರಿತ್ರಿಕ ಹಾಗೂ ಸಾಂಸ್ಕ್ರತಿಕ ಅಧ್ಯಯನಕ್ಕೆ ಅಮೂಲ್ಯವಾದ ಆಕರಗಳಾಗಿವೆ. ಪ್ರಾಚೀನ ಕಾಲದಿಂದ ಜೈನ, ಶಾಕ್ತ, ಶೈವ, ವೈಷ್ಣವ, ಬೌದ್ಧ ಮುಂತಾದ ಧಾರ್ಮಿಕ ಪಂಥಗಳ ಕುರುಹುಗಳು ಇಲ್ಲಿನ ದೇವಾಲಯಗಳು ಹಾಗೂ ಶಿಲ್ಪಾವಶೇಷಗಳ ಮೂಲಕ ಉಳಿದು ಬಂದಿದೆ. ದಾವಣಗೆರೆ ತಾಲೂಕುಗಳಲ್ಲಿ ಬರುವ ಮೂರು ಹೋಬಳಿಗಳಲ್ಲಿ ದಾವಣಗೆರೆ ಕಸಬಾ ಹೋಬಳಿಯೂ ಒಂದಾಗಿದ್ದು. ಮೌಖಿಕ ಸಾಹಿತ್ಯದಲ್ಲಿ ತನ್ನದೇ ಆದ ವಿಶೇಷತೆಯನ್ನು ಹೊಂದಿದೆ. ನಂಬಿಕೆ-ಆಚರಣೆ, ಜಾತ್ರೆ-ಉತ್ಸವ, ಹಬ್ಬ-ಹರಿದಿನಗಳು ಈ ಹೋಬಳಿ ಪರಿಸರದ ಸಾಂಸ್ಕೃತಿಕ ವೈಶಿಷ್ಟ್ಯತೆಗೆ ಕನ್ನಡಿಯಾಗಿದೆ.

**ಅಧ್ಯಯನದ ಉದ್ದೇಶ**

ಯಾವುದೇ ಒಂದು ಸಂಶೋಧನ ಅಧ್ಯಯನಕ್ಕೆ ಉದ್ದೇಶವು ಬಹುಮುಖ್ಯವಾಗಿರುತ್ತದೆ. ಉದ್ದೇಶವು ಅಧ್ಯಯನಕ್ಕೆ ಗುರಿ ಇದ್ದಂತೆ. ಅಧ್ಯಯನದ ಉದ್ದೇಶವನ್ನು ಸಾಧಿಸಿದರೆ ಗುರಿಯನ್ನು ಸಾಧಿಸಿದಂತೆ. ಸಂಶೋಧನೆಯ ಉದ್ದೇಶಗಳು ಒಂದು ನಿರ್ದಿಷ್ಟ ಸಂಶೋಧಾನಾ ಯೋಜನೆ ಅಡಿಯಲ್ಲಿ ಬರುವ ಒಟ್ಟು ಕೆಲಸಗಳ ಒಂದು ಸ್ಥೂಲ ಚಿತ್ರಣವನ್ನು ಕೊಡುತ್ತದೆ. ಸಮಸ್ಯೆ ರೂಪದಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರ ಹುಡುಕುವ ಕೆಲಸವನ್ನು ಉದ್ದೇಶ ಸೂಚಿಸುತ್ತದೆ. ಇದನ್ನೆ ಇನ್ನೊಂದು ವಿಧದಲ್ಲಿ ಹೇಳುವುದಾದರೆ, ಅಧ್ಯಯನ ಏನನ್ನು ಶೋಧಿಸಲು ಅಥವಾ ಪರೀಕ್ಷಿಸಲು ಮತ್ತು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತದೆ ಎನ್ನುವುದನ್ನು ಉದ್ದೇಶವು ಹೇಳುತ್ತದೆ. ಉದ್ದೇಶವು ಸಂಶೋಧನಾ ಕೆಲಸಗಳಿಗೆ ಒಂದು ಮಾರ್ಗಸೂಚಿಯಂತೆ ಕೆಲಸ ಮಾಡುತ್ತದೆ. ಆದ್ದರಿಂದ ಸಂಶೋಧನಾ ಅಧ್ಯಯನಕ್ಕೆ ಉದ್ದೇಶವಿರಲೇಬೇಕು. ಕೆಲವೊಂದು ನಿರ್ದಿಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಸಂಶೋಧನೆಯನ್ನು ಕೈಗೊಂಡು ಕಾರ್ಯನಿರ್ವಹಿಸಿದಾಗ ಅದು ಪರಿಪೂರ್ಣವೆನಿಸುತ್ತದೆ.

ಪ್ರಸ್ತುತ ಅಧ್ಯಯನವು 'ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಅಜ್ಞಾತವಾಗಿರುವ ದಾವಣಗೆರೆ ಕಸಬಾ ಪರಿಸರದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಈ ಮೂಲಕ ಬೆಳಕಿಗೆ ತರುವ ಉದ್ದೇಶವನ್ನು ಹೊಂದಲಾಗಿದೆ. ಕರ್ನಾಟಕದ ಹೃದಯ ಭಾಗದಲ್ಲಿರುವ ದಾವಣಗೆರೆಯ ಪರಿಸರದಲ್ಲಿ ಪ್ರಾಚೀನ ಕ್ಷೇತ್ರಗಳನ್ನು ಕಾಣಬಹುದು. ತುಂಗಾ ಪ್ರದೇಶ, ಭದ್ರಾ, ಹರಿದ್ರಾ ನದಿಗಳ ತೀರ ಹಾಗೂ ಬಯಲು ಸೀಮೆಯ ಜೊತೆಗೆ ಅರೆಮಲೆನಾಡಿನ ವಾತಾವರಣವನ್ನು ಕೂಡ ಹೊಂದಿದೆ. ನೈಸರ್ಗಿಕವಾಗಿ ಕಂಡುಬರುವ ಬೆಟ್ಟ-ಗುಡ್ಡ, ಕಲ್ಲಾಸರೆಗಳು, ಕಣಿವೆಗಳು, ಅಪಾರ ಸಂಖ್ಯೆಯಲ್ಲಿದ್ದು, ವಿಶಿಷ್ಟವಾದ ಭೌಗೋಳಿಕತೆಯನ್ನು ಹೊಂದಿದೆ. ಚಾರಿತ್ರಿಕವಾಗಿ ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ನೊಳಂಬರು, ಉಚ್ಚಂಗಿ ಪಾಂಡ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ

ಒಡೆಯರು, ಚಿತ್ರದುರ್ಗದ ಪಾಳೆಯಗಾರರು ಮತ್ತು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು. ಇದನ್ನು ಚಾರಿತ್ರಿಕ ಹಾಗೂ ಸಾಹಿತ್ಯಿಕವಾಗಿಯೂ ಕೂಡ ತಿಳಿಯಲಾಗಿದೆ. ಭೌಗೋಳಿಕವಾಗಿ ತುಂಗಭದ್ರಾ ನದಿ ಪರಿಸರದ ಈ ಭಾಗದಲ್ಲಿ ಪ್ರಾಗೈತಿಹಾಸಿಕ ಕಾಲದ ಆದಿಮಾನವನ ನೆಲೆಗಳು ಹಾಗೂ ನೈಸರ್ಗಿಕವಾದ ಮತ್ತು ಸಾಂಸ್ಕೃತಿಕ ಸ್ಥಳಗಳು ವಿಶೇಷವಾಗಿದ್ದು, ಅಂತಹ ಸ್ಥಳನಾಮಗಳನ್ನು ಅಧ್ಯಯನಕ್ಕೆ ಅನುಗುಣವಾಗಿ ವ್ಯವಸ್ಥಿತವಾಗಿ ಬಳಸಿಕೊಳ್ಳಲಾಗಿದೆ. ಸಾಂಸ್ಕೃತಿಕ ಅಧ್ಯಯನ ಸಂದರ್ಭದಲ್ಲಿ ವಾಸ್ತುಶಿಲ್ಪವನ್ನು ಕುರಿತು ತಿಳಿಸಲಾಗಿದು. ವಾಸ್ತುಶಿಲ್ಪದಲ್ಲಿ ದೇವಾಲಯಗಳು, ಕೋಟೆಗಳು, ಕೆರೆ-ಕಟ್ಟೆಗಳು ಹಾಗೂ ಮೂರ್ತಿಶಿಲ್ಪ ಮತ್ತು ಸ್ಮಾರಕ ಶಿಲ್ಪಗಳನ್ನು ಕುರಿತು ತಿಳಿಸಲಾಗಿದೆ. ಇಲ್ಲಿನ ಪ್ರಾಚೀನ ದೇವಾಲಯಗಳ ವಾಸ್ತುಶೈಲಿ, ಆಡಳಿತ ವಿಭಾಗಗಳು, ಧರ್ಮಗಳು, ನಂಬಿಕೆ-ಆಚರಣೆಗಳು, ಶಾಸನಗಳು, ಮೂರ್ತಿಶಿಲ್ಪಗಳು, ವೀರಗಲ್ಲುಗಳು, ಸತಿಗಲ್ಲುಗಳು, ನಿಷಧಿಗಲ್ಲುಗಳು, ಕೃಷಿ, ನೀರಾವರಿ ವ್ಯವಸ್ಥೆಗಳು, ತೆರಿಗೆಗಳು, ಗ್ರಾಮ, ಪಟ್ಟಣ, ಸಂತೆ ಮುಂತಾದ ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಒಟ್ಟಾರೆಯಾಗಿ ಈ ಪರಿಸರದ ಪುರಾತತ್ವೀಯ ಸಾಹಿತ್ಯಿಕ, ಐತಿಹಾಸಿಕ ಮತ್ತು ಮೌಖಿಕ ಆಕರಗಳ ಮೂಲಕ ಇಡೀ ದಾವಣಗೆರೆ ಕಸಬಾ ಮತ್ತು ಸುತ್ತಮುತ್ತ ಇರುವ ಎಲ್ಲಾ ಆಕರಗಳನ್ನು ಸಮಗ್ರವಾಗಿ ಬಳಸಿಕೊಂಡು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ನಡೆಸುವ ಉದ್ದೇಶವನ್ನು ಹೊಂದಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಅಧ್ಯಯನ ವಿಷಯಕ್ಕೆ ಸಂಬಧಿಸಿದಂತೆ ಅಧ್ಯಯನದ ವ್ಯಾಪ್ತಿ ಇರಲೇಬೇಕು. ಒಂದು ವಿಷಯವನ್ನು ವ್ಯಾಪ್ತಿಯ ಮಿತಿಯಲ್ಲಿ ಅಧ್ಯಯನ ಕೈಗೊಂಡಾಗ ಅದು ಪರಿಪೂರ್ಣವಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಭೌಗೋಳಿಕ ವ್ಯಾಪ್ತಿಗೆ ಬರುವ ೫೭ ಗ್ರಾಮಗಳು ಮಾತ್ರ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅಲ್ಲದೆ ಈ ಪರಿಸರದ ಸುತ್ತಮುತ್ತಲಿನ ಪ್ರದೇಶಗಳ ವಿವಿಧ ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ವಿಧಾನ**

ಸಂಶೋಧನೆಗೆ ಬಹುಮುಖ್ಯವಾಗಿ ಅಧ್ಯಯನ ವಿಧಾನವಿರಬೇಕು. ಆ ವಿಧಾನವು ಒಂದು ವ್ಯವಸ್ಥಿತ ಹಾಗೂ ವೈಜ್ಞಾನಿಕವಾದ ಮಾರ್ಗ, ಸಾಂಸ್ಕೃತಿಕ ಹಿನ್ನಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದ್ದು, ಆ ಮೂಲಕ ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿ, ದಾವಣಗೆರೆ ಕಸಬಾ ಪರಿಸರದ ಕೊಳ್ಳಲಾಗಿದೆ. ವ್ಯಾಪ್ತಿಗೆ ಒಳಪಡಿಸುವಂತಹ ಸ್ಥಳಗಳಿಗೆ ನೇರವಾಗಿ ಬೇಟಿಕೊಟ್ಟು ಅಲ್ಲಿರುವ ಪ್ರಾಚೀನ ಅವಶೇಷಗಳಾದ ದೇವಾಲಯಗಳು, ಕೆರೆ-ಕಟ್ಟೆಗಳು, ಶಾಸನಗಳು, ಕೋಟೆ-ಕೊತ್ತಲಗಳು ಮತ್ತು

ಮೂರ್ತಿ ಶಿಲ್ಪಗಳನ್ನು ದಾಖಲಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅದೇ ರೀತಿ ಮೌಖಿಕ ಆಕರಗಳಾದ ಐತಿಹ್ಯಗಳು, ಸ್ಥಳನಾಮ ಮತ್ತು ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಅಧ್ಯಯನಕ್ಕೆ ಬಳಸಲಾಗಿದೆ.

ದಾವಣಗೆರೆ ಕಸಬಾ ಪರಿಸರಕ್ಕೆ ಸಂಬಂಧಿಸಿದಂತೆ ಸಮಾಜದ, ಸಂಸ್ಕೃತಿಯ ಬಗ್ಗೆ ಸೂಕ್ಷ್ಮ ಅಧ್ಯಯನ ಕೈಗೊಂಡು ಧಾರ್ಮಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ನಂಬಿಕೆ-ಆಚರಣೆಗಳು, ಜಾತ್ರೆ-ಉತ್ಸವಗಳು, ಹಬ್ಬ-ಹರಿದಿನಗಳ ಬಗ್ಗೆ ಅಧ್ಯಯನ ಮಾಡಿ ಸಾಂಸ್ಕೃತಿಕ ಚಿತ್ರಣ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರತಿಯೊಂದು ಸ್ಥಳೀಯ ಇತಿಹಾಸವು ತನ್ನದೇ ಆದ ಪ್ರಾದೇಶಿಕ ಮಹತ್ವವನ್ನು ಹೊಂದಿರುತ್ತದೆ. ದಾವಣಗೆರೆ ಕಸಬಾವು ಪರಿಸರವು ಇದಕ್ಕೆ ಹೆಸರಲ್ಲಿ. ಹಾಗೆಯೇ ಯಾವುದೇ, ಒಂದು ವಿಷಯವನ್ನು ಕುರಿತು ಕೈಗೊಳ್ಳುವ ಅಧ್ಯಯನವು ಸೂಕ್ಷ್ಮವೂ ಸಮಗ್ರವೂ ಹಾಗೂ ವ್ಯವಸ್ಥಿತವಾದ  ಕ್ರಮಬದ್ಧವಾದ ರೀತಿಯಲ್ಲಿ ಇರಬೇಕಾದರೆ, ಅದಕ್ಕೆ ತನ್ನದೇ ಆದ ಅಧ್ಯಯನದ ಸ್ವರೂಪ ಅಗತ್ಯವಾಗಿರುತ್ತದೆ. ಆಗ ಅದರೊಳಗೆ ನಡೆಸಿದ ಅಧ್ಯಯನವು ವ್ಯವಸ್ಥಿತವಾದ ಅಧ್ಯಯನವಾಗಿ ಹೊರಹೊಮ್ಮಲು ಸಾಧ್ಯವಾಗುತ್ತದೆ. ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯ ಕುರಿತು ವಿಶ್ಲೇಷಿಸುವುದೇ ಅಧ್ಯಯನದ ಸ್ವರೂಪವಾಗಿದೆ. ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಈ ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳು ಇವೆ. ಪ್ರಸ್ತುತ ಅಧ್ಯಯನವು ದಾವಣಗೆರೆ ಹೋಬಳಿಯ ಸಾಂಸ್ಕೃತಿಕ ಪರಂಪರೆಯನ್ನು ವಿವರಿಸುವುದ್ದಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪ, ಹಾಗೂ ಇದುವರೆಗೂ ಈ ಪರಿಸರದ ಬಗ್ಗೆ ನಡೆದಿರುವ ಅಧ್ಯಯನಗಳ ಕುರಿತು ಸಮೀಕ್ಷೆ ನಡೆಸಲಾಗಿದೆ. ಮತ್ತು ಪ್ರಾಸ್ತಾವಿಕ ವಿಚಾರಗಳೊಂದಿಗೆ ದೇವಾಲಯ ಶಾಸನ ಮತ್ತು ಸಾಂಸ್ಕೃತಿಕ ಆಯಾಮಗಳ ಬಗ್ಗೆ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಪರಿಸರದ, ವಿಶ್ಲೇಷಣೆ, ಸ್ಥಳನಾಮ, ಪ್ರಾಗಿತಿಹಾಸ ಕಾಲ ಹಾಗೂ ಇಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳ ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಾಸ್ತು ಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ಕುರಿತು ವಿವರಣೆಯನ್ನು ನೀಡಲಾಗಿದ್ದು, ದೇವಾಲಯಗಳ ಹುಟ್ಟು ಮತ್ತು ನಿರ್ಮಾಣ ಅವುಗಳ

ಬೆಳವಣಿಗೆಯೊಂದಿಗೆ ಮತ್ತು ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಕಂಡುಬರುವ ಶೈವ, ವೈಷ್ಣವ, ಶಾಕ್ತ, ಜೈನ, ಇತರೆ ದೇವಾಲಯಗಳ ನಿರ್ಮಾಣ ಮತ್ತು ಪ್ರಾಚೀನತೆಯನ್ನು ಕುರಿತಾದ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಹಾಗೂ ಕೆರೆಗಳ ಐತಿಹಾಸಿಕ ಮಹತ್ವ ಮುಂತಾದವುಗಳ ಸಮಗ್ರ ಚಿತ್ರಣವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಶಾಸನಗಳು ಅವುಗಳ ಕಾಲ, ಮಹತ್ವ, ಅವು ಒಳಗೊಂಡಿರುವ ವಿವರಗಳು ಶಾಸನಗಳು ವಿಧಗಳಾದ ಶಿಲಾಶಾಸನಗಳು, ವೀರಗಲ್ಲುಗಳು, ಮಹಾಸತಿಗಲ್ಲುಗಳು ಮತ್ತು ಅಂದಿನ ಕಾಲದ ಸಮಾಜದ ವ್ಯವಸ್ಥೆಗಳ ಕುರಿತು ಚರ್ಚಿಸಲಾಗಿದೆ. ಆ ಸಮಾಜದ ವರ್ಣವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ, ಶಿಕ್ಷಣ ವ್ಯವಸ್ಥೆ, ಹಾಗೂ ಜನಸಮಾನ್ಯರ ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ವಿವೇಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ನಂಬಿಕೆಗಳು ಮತ್ತು ಆಚರಣೆಗಳನ್ನು ಕುರಿತು ಚರ್ಚಿಸಲಾಗಿದೆ. ಇದರಲ್ಲಿ ಕಂಡು ಬರುವ ಐತಿಹ್ಯಗಳು ಸಮಾಜದಲ್ಲಿ ಕಂಡುಬರುವ ಹಬ್ಬಗಳು, ಜಾತ್ರೆ, ಉತ್ಸವಗಳು ಕ್ರೀಡಾ ಕಲೆ ಮುಂತಾದವುಗಳನ್ನು ಜಾನಪದ ವೈಶಿಷ್ಟ್ಯತೆಯ ಮೂಲಕ ಜೀವನ ಶೈಲಿಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಕೊನೆಯ ಅಥವಾ ಆರನೆಯ ಅಧ್ಯಾಯವು ಸಮಾರೋಪವಾಗಿದ್ದು. ಅಧ್ಯಯನದ ಫಲಿತಗಳು ಹಾಗೂ ಇಡೀ ಅಧ್ಯಯನದ ಸಂಕ್ಷಿಪ್ತ ರೂಪವನ್ನು ಒಳಗೊಂಡಿದೆ. ಅಧ್ಯಯನಕ್ಕೆ ಪೂರಕವಾಗಿ ಪರಾಮರ್ಶನ ಗ್ರಂಥಗಳು, ಸಂದರ್ಶನ ಸೂಚಿ, ನಕ್ಷೆಗಳು, ತಲನಕ್ಷೆಗಳು, ಛಾಯಾಚಿತ್ರಗಳನ್ನು ಅನುಬಂಧದಲ್ಲಿ ಕೊಡಲಾಗುತ್ತದೆ. ಹೀಗೆ ದಾವಣಗೆರೆ ಕಸಬಾ ಪರಿಸರದ ಸಮಗ್ರವಾದ ಚಿತ್ರಣವನ್ನು ಮೇಲಿನ ಅಧ್ಯಾಯಗಳಲ್ಲಿ ಸಂಯೋಜಿಸಲಾಗಿದೆ.

**ಅಧ್ಯಯನಗಳ ಸಮೀಕ್ಷೆ**

ದಾವಣಗೆರೆ ಜಿಲ್ಲೆ ಮತ್ತು ತಾಲೂಕಿಗೆ ಸಂಬಂಧಿಸಿದಂತೆ ಪ್ರಾಚೀನ ರಾಜಕೀಯ ಮತ್ತು ಐತಿಹಾಸಿಕ ಸ್ಥಳಗಳ ಪರಿಚಯ, ಜನಪದ ಸಾಹಿತ್ಯ ಮುಂತಾದ ವಿಷಯಗಳನ್ನು ಕುರಿತಂತೆ ಕೆಲವು ಅಧ್ಯಯನಗಳು ನಡೆದಿದ್ದು, ಅವುಗಳು ಪರಿಚಯಾತ್ಮಕವಾಗಿ ಪ್ರಕಟಿಸಲ್ಪಟ್ಟಿರುವ ಲೇಖನಗಳು, ಸಂಶೋಧನಾತ್ಮಕ ಲೇಖನಗಳು, ಪರಿಚಯ ಕೈಪಿಡಿಗಳು, ಸ್ಮರಣ ಸಂಚಿಕೆಗಳು ಹಾಗೂ ಕೃತಿಗಳು ಪ್ರಕಟಗೊಂಡಿವೆ. ಅವುಗಳನ್ನು ಈ ಕೆಳಕಂಡಂತೆ ಗಮನಿಸಬಹುದು. ಗಿರಿಜಾ ಟಿ. ಅವರು ದಾವಣಗೆರೆ ಜಿಲ್ಲಾ ದರ್ಶಿನಿ ಗ್ರಂಥದಲ್ಲಿ ದಾವಣಗೆರೆ ಜಿಲ್ಲೆಯ ಸ್ಥಳಗಳ ಬಗ್ಗೆ ಭೌಗೋಳಿಕ ಪರಿಸರ ಹಾಗೂ ಸಂಪನ್ಮೂಲಗಳ ಬಗ್ಗೆ ಅಂಕಿ-ಅಂಶ ನೀಡಿದ್ದಾರೆ. ಈಶ್ವರಪ್ಪ ಎಂ.ಜಿ. ಶತಮಾನದ ದಾವಣಗೆರೆ ಮತ್ತು ದವನಸಿರಿ ಗ್ರಂಥದಲ್ಲಿ ದಾವಣಗೆರೆ ಪರಿಸರದ ಪ್ರಾಚೀನ ಮತ್ತು ಆಧುನಿಕತೆಯ

ಅಂಶಗಳನ್ನು ಕುರಿತು ವಿವರಿಸಿದ್ದಾರೆ. ತಿಪ್ಪೇಸ್ವಾಮಿ ಹೆಚ್. ಅವರು ದಾವಣಗೆರೆ ಜಿಲ್ಲೆಯ ದೇವಾಲಯಗಳು ಎಂಬ ಸಂಶೋಧನಾ ಗ್ರಂಥದಲ್ಲಿ ದೇವಾಲಯಗಳ ಕುರಿತು ರಚನೆ ಆಕರಗಳು ಬಳಸಿದ ವಿಧಾನಗಳನ್ನು ಚರ್ಚಿಸಿದ್ದಾರೆ.

ಸದಾಶಿವಪ್ಪ ಶ್ಯಾಗಲೆ ಅವರ ದಾವಣಗೆರೆ ಜಿಲ್ಲೆಯ ಒಂದು ಪಕ್ಷಿನೋಟ ಗ್ರಂಥದಲ್ಲಿ ದಾವಣಗೆರೆ ಪರಿಸರದ ಸ್ಥಳನಾಮ ಬಗ್ಗೆ ಸಂಸ್ಕೃತಿ ಪರಂಪರೆ ಬಗ್ಗೆ ನಗರದ ಬೆಳವಣಿಗೆ ಶಿಕ್ಷಣ ವಾಣಿಜ್ಯ ಮತ್ತು ವ್ಯಾಪಾರದ ಬಗ್ಗೆ ನೀಡಿದ್ದಾರೆ. ಬಾತಿ ಬಸವರಾಜಪ್ಪ ಅವರು ಬಾತಿ ಬೆಳಗು ಎಂಬ ಗ್ರಂಥದಲ್ಲಿ ಆ ಪರಿಸರಕ್ಕೆ ಸಂಬದಪಟ್ಟಂತೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಸುರೇಶ ಬಿ. ಅವರು ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳ ದೇವಾಲಯಗಳು ಎಂಬ ಗ್ರಂಥದಲ್ಲಿ ಎರಡು ಭಾಗಗಳಿಗೆ ಸಂಬಂದಿಸಿದ ದೇವಾಲಯಗಳ ಬಗ್ಗೆ ಸ್ಥೂಲವಾಗಿ ಚರ್ಚಿಸಿದ್ದಾರೆ. ಪಾಟೇಲ ಮಂಜುನಾಥ ರವರು ದಾವಣಗೆರೆ ಜಿಲ್ಲೆಯ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿ.ಹೆಚ್.ಡಿ ಮಹಾಪ್ರಬಂಧದಲ್ಲಿ) ದಾವಣಗೆರೆ ಜಿಲ್ಲೆಯ ಶಾಸನಗಳ ಅಂಕಿ ಅಂಶಗಳನ್ನು ನೀಡಿದ್ದಾರೆ. ಶಿವತಾರಕ್ ಕೆ.ಬಿ ಅವರು ಕರ್ನಾಟಕ ಪುರಾತತ್ವ ನೆಲೆಗಳು ಎಂಬ ಗ್ರಂಥದಲ್ಲಿ ದಾವಣಗೆರೆ ಜಿಲ್ಲೆಯ ಪ್ರಾಗಿತಿಹಾಸದ ನೆಲೆಗಳನ್ನು ಗುರುತಿಸಿ ವಿವರಣೆ ನೀಡಿದ್ದಾರೆ. ವೆಂಕಟರಾಮಪ್ಪ ಕೆ.ಎನ್ ಮತ್ತು ಲಕ್ಷ್ಮೀನಾರಾಯಣ್. ಕೆ ದಾವಣಗೆರೆ ನಗರದ ಪ್ರಾಕೃತಿಕ ಪರಿಸರ ಎಂಬ ಗ್ರಂಥಗಳಲ್ಲಿ ಹಲವು ವಿಷಯಗಳ ಬಗ್ಗೆ ಚರ್ಚಿಸಿದ್ದಾರೆ. ಗುರು ಎಂ.ಪಿ ದಾವಣಗೆರೆ ಜಿಲ್ಲಾದರ್ಶನ ಎಂಬ ಗ್ರಂಥದಲ್ಲಿ ದಾವಣಗೆರೆ ಜಿಲ್ಲೆಗೆ ಸಂಬಧಿಸಿದಂತೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಸಂತೆ ಬೆನ್ನೂರು ಸುಮಂತೇದ್ರ ನಾಡಿಗ್ ಅವರು ದಾವಣಗೆರೆ ಜಿಲ್ಲೆಯ ಕೆಲವು ಹೆಜ್ಜೆಗಳು ಎಂಬ ಗ್ರಂಥದಲ್ಲಿ ದಾವಣಗೆರೆ ಪರಿಸರದ ಐತಿಹಾಸಿಕ ಹಿನ್ನೆಲೆ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಈ ಮೇಲಿನ ಎಲ್ಲಾ ಗ್ರಂಥಗಳನ್ನು ಅಧ್ಯಯನ ನಡೆಸಿದಾಗ ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ಹಲವಾರು ಅಂಶಗಳನ್ನು ವಿವರಿಸಿರುವುದನ್ನು ನಾವು ಕಾಣಬಹುದು, ಆದರೆ ದಾವಣಗೆರೆ ಕಸಬಾ ಪರಿಸರಕ್ಕೆ ಸಂಬಂಧಿಸಿದಂತೆ ವಿವರಗಳ ಕೊರತೆ, ಮಾಹಿತಿಗಳು ಲಭ್ಯತೆಯಾಗಿಲ್ಲದಿರುವುದನ್ನು ಗಮನಿಸಬಹುದು. ಆದ್ದರಿಂದ ದಾವಣಗೆರೆ ಕಸಬಾ ಪರಿಸರದ ಸಮಗ್ರ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವ ಉದ್ದೇಶವನ್ನು ಈ ಸಂಪ್ರಬಂಧ ಒಳಗೊಂಡಿದೆ.

***

ಅಧ್ಯಾಯ : ಎರಡು

# ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

೨.೧ ಭೌಗೋಳಿಕತೆ

೨.೨ ಸ್ಥಳನಾಮ

೨.೩ ಪ್ರಾಗಿತಿಹಾಸ

೨.೪ ಇತಿಹಾಸ ಕಾಲ

# ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

## ೨.೧ ಭೌಗೋಳಿಕತೆ

ಕರ್ನಾಟಕವು ವಿಭಿನ್ನ ರೀತಿಯ ಭೌಗೋಳಿಕ ಲಕ್ಷಣಗಳನ್ನು ಒಳಗೊಂಡ ಪ್ರದೇಶವಾಗಿದೆ. ಇದು ನಿಸರ್ಗದ ವಿಶೇಷ ಭೌತಿಕ ಲಕ್ಷಣಗಳನ್ನು ಪಡೆದ ಚಿತ್ರದುರ್ಗ ಗಡಿಗೆ ಹೊಂದಿಕೊಂಡ ಸಮೀಪದ ದೂರದಲ್ಲಿರುವ ದಾವಣಗೆರೆಯು ಐತಿಹಾಸಿಕ ಜಿಲ್ಲೆಯಾಗಿದೆ. ಈ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಾಗಿತಿಹಾಸಿಕ ಕಾಲದಿಂದಲೇ ಜನವಸತಿ ಬೆಳೆದು ಬರಲು ಇಲ್ಲಿಯ ಭೌಗೋಳಿಕ ಪರಿಸರವು ಪೂರಕ ಅಂಶವಾಗಿ ಕಾಣುತ್ತದೆ. ಮಾನವನ ಉಗಮ, ವಿಕಾಸ ಹಾಗೂ ಅಭಿವೃದ್ಧಿಯಲ್ಲಿ ಭೌಗೋಳಿಕ ಪರಿಸರ ಗಮನಾರ್ಹ ಪಾತ್ರವಹಿಸುತ್ತದೆ. ಅಷ್ಟೇ ಅಲ್ಲದೇ ಜೀವ ಸಂಕುಲದ ಉಳಿವು ಅಲ್ಲಿನ ಪರಿಸರವನ್ನೇ ಅವಲಂಬಿಸಿರುತ್ತದೆ ಎಂಬುವುದನ್ನು ನಾವು ಅಲ್ಲಗಳೆಯುವಂತಿಲ್ಲ. ರಾಜ ಮಹರಾಜರ ಕೀರ್ತಿ, ರಾಜ್ಯಗಳ ಅಳಿವು-ಉಳಿವು ಸಹ ಅಲ್ಲಿನ ಭೌಗೋಳಿಕ ಪರಿಸರವನ್ನು ಅವಲಂಬಿಸಿರುತ್ತದೆ ಎಂಬುದು ಅದರ ಮಹತ್ವವನ್ನೇ ಎತ್ತಿ ತೋರಿಸುತ್ತದೆ. ಹೀಗೆ ದಾವಣಗೆರೆ ಜಿಲ್ಲಾ ಪರಿಸರದ ಮಾನವ ಆದಿಕಾಲದಿಂದ ಆನೇಕ ಬದಲಾವಣೆಗಳೊಂದಿಗೆ ನಾಗರಿಕತೆಯತ್ತ ಸಾಗಲು ಇಲ್ಲಿನ ಭೌಗೋಳಿಕ ಪರಿಸರವು ಕಾರಣವಾಗಿದೆ. ಈ ಪರಿಸರ ಮಾನವನ ಸರ್ವಾಂಗೀಣ ಅಭಿವೃದ್ಧಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ ಎಂದು ಹೇಳಬಹುದು. ಹೀಗಾಗಿ ಆದಿಮಾನವನು ಇಲ್ಲಿನ ನಿಸರ್ಗದತ್ತವಾದ ಸಂಪತ್ತನ್ನು ತನ್ನ ನಿತ್ಯ ಬಳಕೆಗಾಗಿ ಬಳಸಿಕೊಂಡು ಬೆಳವಣಿಗೆ ಹೊಂದಿದ್ದುದನ್ನು ಕಾಣಬಹುದಾಗಿದೆ.

ದಾವಣಗೆರೆ ಕರ್ನಾಟಕದ ಕೇಂದ್ರಬಿಂದುವಾಗಿ ನೀರಿನ ಆಸರೆ, ಫಲವತ್ತಾದ ಭೂಮಿಯನ್ನು ಹೊಂದಿದ್ದು, ರೈತರ ಸಂಪತ್ತಿನ ಗಣಿಯಾಗಿರುವಂತೆ ಕಂಡುಬರುತ್ತದೆ. ದಾವಣಗೆರೆ ನಗರವು ವಾಣಿಜ್ಯ ಕೇಂದ್ರವಾಗಿ, ಕೈಗಾರಿಕಾ ಕೇಂದ್ರವಾಗಿ ಮತ್ತು ವಿದ್ಯಾಕೇಂದ್ರವಾಗಿ ಅಭಿವೃದ್ದಿಯನ್ನು ಹೊಂದಿರುವುದ ನೋಡಬಹುದಾಗಿದೆ. ದಾವಣಗೆರೆ ಪರಿಸರವು ಐತಿಹಾಸಿಕವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕ ಆಚರಣೆಗಳಿಂದ ಕರ್ನಾಟಕಕ್ಕಷ್ಟೆ ಅಲ್ಲದೇ ಭಾರತದಲ್ಲಿ ಇಂದು ಹೆಸರು ಪಡೆದಿದೆ. ದಾವಣಗೆರೆ ಜಿಲ್ಲೆಯ ಉದ್ದಗಲಕ್ಕೂ ಹಬ್ಬಿರುವ ಬೆಟ್ಟಗುಡ್ಡಗಳ ಸಾಲು, ನೂರಾರು ಗುಡಿ-ಗೋಪುರಗಳು, ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ ಕಲೆ, ಶಾಸನ ಸಂಪತ್ತು, ಸ್ಮಾರಕಗಳು ಪ್ರಾಚೀನ ರಾಜಮನೆತನಗಳ ಭವ್ಯ ಪರಂಪರೆಯನ್ನು ತೆರೆದಿಡುತ್ತ ಮೂಕವಿಸ್ಮಿತರನ್ನಾಗಿ ಮಾಡುತ್ತದೆ. ಭೌಗೋಳಿಕವಾಗಿ

ಕರ್ನಾಟಕದ ಯಾವುದೇ ಮೂಲೆಯಿಂದ ಸುಮಾರು ೨೦೦ ಕಿ.ಮೀ.ಗಳ ಅಂತರದಲ್ಲಿ ಕೇಂದ್ರ ಭಾಗದಲ್ಲಿದೆ. ಪೂರ್ವ ಪಶ್ಚಿಮಗಳ ಮಲೆನಾಡು, ಬಯಲುಸೀಮೆಗಳ ಅಂಚಾಗಿ, ತುಂಗಭದ್ರೆಯ ಒಡಲಿನ ಜನ ಜೀವನವನ್ನು ಹೊಂದಿದೆ. ಉತ್ತರ-ದಕ್ಷಿಣ ಕರ್ನಾಟಕದ ಭಾಷೆ-ಸಂಸ್ಕೃತಿಗಳ ಸಮನ್ವಯತೆಯನ್ನು ಹೊಂದಿದ ಪ್ರದೇಶವಾಗಿದೆ.[೧]

ದಾವಣಗೆರೆಯು ೧೯೯೭ ಆಗಸ್ಟ್ ೧೫ರವರೆಗೂ ಚಿತ್ರದುರ್ಗ ಜಿಲ್ಲೆಯ ಒಂದು ತಾಲ್ಲೂಕು ಆಗಿತ್ತು. ನಂತರ ದಾವಣಗೆರೆ ನಗರವೇ ಪ್ರತ್ಯೇಕ ಜಿಲ್ಲೆಯಾಗಿ ಸ್ಥಾನಮಾನ ಪಡೆದು ಕೊಂಡಿತ್ತು. ಈ ಜಿಲ್ಲೆಯು ವ್ಯಾಪಾರ, ವಾಣಿಜ್ಯ, ಶಿಕ್ಷಣ ಮುಂತಾದ ಕ್ಷೇತ್ರಗಳ ಪ್ರಗತಿಯಿಂದ ಪ್ರಾಚೀನ ಕಾಲದಿಂದಲೂ ಮಹತ್ವವನ್ನು ಪಡೆದುಕೊಂಡಿದೆ. ದಾವಣಗೆರೆ ಹೊನ್ನಾಳಿ, ಚನ್ನಗಿರಿ, ಹರಪನಹಳ್ಳಿ, ಹರಿಹರ, ಜಗಳೂರು ಸೇರಿ ಒಟ್ಟು ಅರು ತಾಲ್ಲೂಕುಗಳನ್ನೂ ಒಳಗೊಂಡಿದ್ದು, ಇಪ್ಪತ್ತುನಾಲ್ಕು ಹೋಬಳಿಗಳಲ್ಲಿ ವಿಸ್ತರಿಸಿಕೊಂಡಿದೆ. ದಾವಣಗೆರೆ ತಾಲೂಕು ಮೂರು ಹೋಬಳಿಗನ್ನು ಒಳಗೊಂಡಿದೆ. ಅವುಗಳೆಂದರೆ ದಾವಣಗೆರೆ ಕಸಬಾ, ಮಾಯಕೊಂಡ, ಆನಗೋಡುಗಳಾಗಿವೆ. ಇದು ಕರ್ನಾಟಕದ ಮದ್ಯಭಾಗದಲ್ಲಿದ್ದು, ಸಮುದ್ರ ಮಟ್ಟಕ್ಕಿಂತ ಸರಾಸರಿ ೬೦೨.೬ ಮೀ ಎತ್ತರದಲ್ಲಿದೆ. ೧೪. ೨೮ ಅಕ್ಷಾಂಶ ಮತ್ತು ೭೫. ೫೯ ರೇಖಾಂಶದಲ್ಲಿರುವ ದಾವಣಗೆರೆ ನಗರವು ಬಯಲು ಹಾಗೂ ಸಮತಲದಲ್ಲಿದೆ. ವರ್ಷದ ಬಹುಕಾಲ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾಗಿ ಬೇಸಿಗೆಯಲ್ಲಿ ತಾಪಮಾನವು ಮಾರ್ಚ್, ಎಪ್ರಿಲ್, ಮೇ ತಿಂಗಳಲ್ಲಿ ಹೆಚ್ಚಿರುತ್ತದೆ. ೭೭.೩ ಪ್ಯಾರಾನೇಟ್ನಷ್ಟು ವರ್ಷದ ಸರಾಸರಿ ಉಷ್ಣಾಂಶವಿರುತ್ತದೆ. ಅದರೆ ಜುಲೈ ಆಗಸ್ಟ್‌ನಲ್ಲಿ ೮೦% ವರೆಗೂ ಹೆಚ್ಚಾಗುತ್ತದೆ. ಜೂನ್ ತಿಂಗಳಿನಿಂದ ಮಳೆಗಾಲ ಪ್ರಾರಂಭವಾಗುತ್ತದೆ. ಜುಲೈ, ಆಗಸ್ಟ್, ಸೆಪ್ಟಂಬರ್, ಅಕ್ಟೋಬರ್ ವರೆಗೂ ಹೆಚ್ಚು ಮಳೆ ಬರುತ್ತದೆ. ಸರಾಸರಿ ೫೭೮ ಮಿ.ಮೀ ಮಳೆ ಬೀಳುತ್ತದೆ.[೨]

**ನದಿಗಳು**

ತುಂಗಭದ್ರಾ ದಾವಣಗೆರೆಯ ಪ್ರಮುಖ ನದಿಯಾಗಿದೆ. ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಈ ನದಿಯು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾಗಿ ಮುಂದೆ ಎರಡು ಹರಿಗಳ ಮೂಲಕ ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲ್ಲಿ ಒಂದು ತುಂಗಾ ನದಿ, ಇನ್ನೊಂದು ಭದ್ರಾ ನದಿ, ಎರಡೂ ಸೇರಿ ಮುಂದೆ ಸಾಗಿದಾಗ, ತುಂಗ ಭದ್ರಾ ಎಂದು ಕರೆಯಲಾಗಿದೆ. ದಾವಣಗೆರೆ ಪರಿಸರದ ಹತ್ತಿರದಲ್ಲಿ ಹರಿಯುವ ತುಂಗಭದ್ರಾ ನದಿಯು ಅಚ್ಚುಕಟ್ಟು ಪ್ರದೇಶದ ಭೂಮಿಗೆ ನೀರನ್ನು ಒದಗಿಸುತ್ತದೆ. ಭದ್ರಾ ಜಲಾಶಯದಿಂದ ಎರಡು ಪ್ರಮುಖ ಕಾಲುವೆಗಳಾಗಿ ದಾವಣಗೆರೆ ಹರಿದು ಬಂದು ನೀರಾವರಿಗೆ

ಅನುಕೂಲವಾಗಿದೆ. ಲಕ್ಕವಳ್ಳಿಯಲ್ಲಿ ಭದ್ರಾನದಿಗೆ ಅಣ್ಣೆಕಟ್ಟು ನಿರ್ಮಿಸಿ ಜನತೆಗೆ ಕುಡಿಯುವ ಹಾಗೂ ವ್ಯವಸಾಯಕ್ಕೆ ನೀರಿನ ಸೌಕರ್ಯವನ್ನು ಒದಗಿಸಲಾಗಿದೆ.

**ಉಪನದಿಗಳು**

ಚಿಕ್ಕಹಗರಿ, ಚಿನ್ನಹಗರಿ, ಹರಿದ್ರಾವತಿಗಳು ಉಪನದಿಗಳಾಗಿ ಹರಿಯುತ್ತವೆ. ದಾವಣಗೆರೆ ಪರಿಸರದಿಂದ ಕೇಲವು ಕಿ.ಮೀ. ದೂರದಲ್ಲಿ ಇರುವ ೬೪.ಕಿ.ಮೀ. ವಿಸ್ತಾರದ ಸೂಳೆಕೆರೆ ಅಥವಾ ಶಾಂತಿಸಾಗರಕ್ಕೆ ೧೧-೧೨ನೇ ಶತಮಾನದಲ್ಲಿ ಹಿರೇಹಳ್ಳ-ಸೊಪ್ಪಿನಹಳ್ಳಗಳಿಗೆ ಅಡ್ಡಕಟ್ಟೆ ಕಟ್ಟಿ ಜಲಾಶಯ ನಿರ್ಮಿಸಿದ್ದಾರೆ. ಮುಖ್ಯ ಕಾಲುವೆಗೆ 'ಹರಿದ್ರಾವತಿ' ಎಂದೂ, ಉತ್ತರದ ನಾಲೆಗೆ 'ಪದ್ಮನಾಲೆ' ಎಂದೂ, ದಕ್ಷಿಣದ ನಾಲೆಗೆ 'ಬಸವನಾಲೆ' ಎಂದೂ ಕರೆಯುತ್ತಾರೆ. ಈ ಜಲಾಶಯದಿಂದ ೧೭೯ ೨.೫ ಹೆಕ್ಟೇರು ಅಚ್ಚುಕಟ್ಟು ಪ್ರದೇಶವಾಗಿದೆ. ಹರಿದ್ರಾ ನದಿಯು ದೇವರಬೆಳೆಕೆರೆಯ ಸುತ್ತಮುತ್ತದ ಗ್ರಾಮಗಳ ಜನರಿಗೆ ಕೃಷಿಗೆ ಮತ್ತು ಕುಡಿಯುವ ನೀರಿಗೆ ಆಸರೆಯಾಗಿದೆ.

**ಬೆಟ್ಟ-ಗುಡ್ಡಗಳು**

ಮಾಯಕೊಂಡದಿಂದ ಅಣಜಿಯವರೆಗೆ ಈ ಪರಿಸರದ ಪೂರ್ವ ಭಾಗದಲ್ಲಿ ಅಷ್ಟು ಎತ್ತರವಲ್ಲದ ಹಾಗೂ ಗುಡ್ಡದ ಸಾಲು ಬಾತಿಗುಡ್ಡ ಬೆಟ್ಟದಸಾಲುಗಳು ಇವೆ. ಆದರೆ ದಾವಣಗೆರೆ ಕಸಬಾ ವ್ಯಾಪ್ತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬೆಡ್ಡ-ಗುಡ್ಡಗಳು ಕಂಡುಬರುವುದಿಲ್ಲ.

**ಸರಾಸರಿ ಮಳೆ**

ದಾವಣಗೆರೆ ತಾಲೂಕಿನಲ್ಲಿ ಸರಾಸರಿ ೬೨೯.೯ಮೀ.ಮೀ ಮಳೆಯಾಗುತ್ತದೆ. ವಾಸ್ತವಿಕವಾಗಿ ೬೬೦.೭ಮೀ.ಮೀ. ಮಳೆ ಬೀಳುವ ಸಾಧ್ಯತೆಯೂ ಕಂಡುಬರುತ್ತದೆ. ಮಳೆಗಾಲದಲ್ಲಿ ೫೦ ಸೆಂ.ಮೀ.ಮಳೆ ಬೀಳುತ್ತದೆ. ಇಡೀ ಜಿಲ್ಲೆಯಲ್ಲಿ ಕಡಿಮೆ ಮಳೆ ಬೀಳುವ ಪ್ರದೇಶ ಎಂದರೆ ಜಗಳೂರು ತಾಲೂಕಾಗಿದೆ. ಹೆಚ್ಚು ಮಳೆ ಬೀಳುವ ತಾಲೂಕೆಂದರೆ ಚನ್ನಗಿರಿಯಾಗಿದೆ.

**ಖನಿಜ ಸಂಪತ್ತು**

ಸಾಮಾನ್ಯವಾಗಿ ಭೂಮಿಯಿಂದ ಗಣಿಯಿಟ್ಟು ತೆಗೆದ ಎಲ್ಲಾ ಸ್ವಾಭಾವಿಕ ವಸ್ತುಗಳನ್ನು ಖನಿಜಗಳೆಂದು ಕರೆಯುತ್ತಾರೆ. ಈ ಜನಜನಿತ ಭಾವನೆಯ ಪ್ರಕಾರ ಲೋಹಗಳು, ಅದಿರುಗಳು, ಕಲ್ಲಿದ್ದಲು, ಕಲ್ಲೆಣ್ಣೆ, ಸುಣ್ಣಶಿಲೆ ಇವುಗಳಲ್ಲದೆ ಕಟ್ಟಡದ ಮತ್ತು ಜಲ್ಲಿಕಲ್ಲುಗಳೂ ಕೂಡ ಖನಿಜಗಳೆಂದು ಪರಿಗಣಿಸಲಾಗಿದೆ.

ಕೃಷಿಯಾಗಿದೆ. ಕೃಷಿಯ ಜೊತೆಗೆ ಕುರಿ, ಕೋಳಿ, ಪಾರಿವಾಳ, ಹಂದಿ, ಎಮ್ಮೆ, ಹಸುಗಳನ್ನು ಸಾಕುತ್ತಾರೆ. ಹಸು-ಎಮ್ಮೆಗಳನ್ನು ಹೈನುಗಾರಿಕೆಗಾಗಿ ಸಾಕಿದರೆ, ಕೃಷಿಗಾಗಿ ಎತ್ತುಗಳನ್ನು ಸಾಕುತ್ತಾರೆ. ಇಂದಿನ ಆಧುನಿಕ ಜೀವನಕ್ಕೆ ಬಂದಿರುವ ಗ್ರಾಮಗಳಲ್ಲಿ ಯಂತ್ರಗಳನ್ನು ಕೃಷಿಗೆ ಬಳಸುತ್ತಿರುವುದನ್ನು ನೋಡಬಹುದಾಗಿದೆ. ಪ್ರಸ್ತುತ ದಾವಣಗೆರೆ ಕಸಬಾ ಪರಿಸರದಲ್ಲಿ ಎಲ್ಲಾ ಧರ್ಮದ ಜನರು ವಾಸವಾಗಿದ್ದಾರೆ. ಲಿಂಗಾಯಿತ, ಒಕ್ಕಲಿಗ, ಅಕ್ಕಸಾಲಿಗ, ನಾಯಕರು, ವಿಶ್ವಕರ್ಮ ಸಾಮಾಜದವರು, ಬಣಜಿಗ, ದಾಸರು, ಕುರುಬರು, ಮರಾಠಿಯರು, ಮಾರವಾಡಿಗರು, ಶೆಟ್ಟಿ, ಮುಸ್ಲಿಂರು, ಕೆಳ ಜಾತಿಗಳು ಛಲವಾದಿಗಳು, ಮಾದಿಗರು, ಕೊರವರು, ಸಮಾಗರರು, ಸವಿತಾ ಜನಾಂಗದವರು, ಇವರು ತಮ್ಮ ತಮ್ಮ ಕುಲ ಕಸುಬುಗಳನ್ನು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ.

## ೨.೨ ಸ್ಥಳನಾಮ

ಸ್ಥಳನಾಮಗಳು ಮೇಲ್ನೋಟಕ್ಕೆ ಸಾಮಾನ್ಯ ಗುರುತಿನ ಚಿಹ್ನೆಗಳಾಗಿ ಕಂಡರೂ ಭಾಷಾಶಾಸ್ತ್ರಜ್ಞರೋ, ಇತಿಹಾಸಕಾರರೋ, ಪುರಾತತ್ವಶಾಸ್ತ್ರಜ್ಞರೋ ಅವುಗಳನ್ನು ತನ್ನ ಶಾಸ್ತ್ರಕ್ಕನುಗುಣವಾಗಿ ಒರೆಹಚ್ಚಿ ನೋಡಿದಾಗ ಅವುಗಳಿಂದ ಅತ್ಯಂತ ಕುತೂಹಲಕಾರಿ ಅಂಶಗಳು ಹೊರಬರುತ್ತದೆ. ಶಾಸ್ತ್ರೀಯವಾಗಿ ನಡೆಯ ಬೇಕಾದ ಅಧ್ಯಯನಗಳ ಪೈಕಿ ಸ್ಥಳನಾಮ ಅಧ್ಯಯನವೂ ಒಂದಾಗಿದೆ. ಮಾನವನ ಹುಟ್ಟು ಅವನ ವಾಸಿಸುತ್ತಿದ್ದ ಸ್ಥಳಗಳ ಉಗಮ, ಇತಿಹಾಸ, ಜನಜೀವನ, ಸಂಸ್ಕೃತಿ, ನಾಗರಿಕತೆ, ಪಳೆಯುಳಿಕೆಗಳು ಮುಂತಾದವುಗಳ ಬಗ್ಗೆ ತಿಳುವಳಿಕೆ ಸ್ಥಳನಾಮಗಳ ಅಧ್ಯಯನದಿಂದ ಸಾಧ್ಯವಾಗುತ್ತದೆ. ಗತಕಾಲದಲ್ಲಿ ನಡೆದ ಘಟನೆಗಳನ್ನು ಭೌಗೋಳಿಕ ವಿವರಗಳನ್ನು ಯುದ್ಧದ ಪರಿಣಾಮಗಳನ್ನು ವೀರರು ಜಯಿಸಿದ ಕಾಳಗಗಳನ್ನು ರಾಜರು ಕೊಟ್ಟ ದತ್ತಿ ದಾನಗಳನ್ನು ಮಾಡಿದ ಯಜ್ಞ ಯಾಗಾದಿಗಳನ್ನು ಆರ್ಥಿಕ ಅಭಿವೃದ್ಧಿಯನ್ನು, ಜ್ಞಾನದ ಮುನ್ನಡೆಯನ್ನು, ಆ ಪ್ರದೇಶದ ವಿಷಯವನ್ನು ಸ್ಥಳನಾಮಗಳು ತಿಳಿಸುತ್ತವೆ. ಒಂದೊಂದು ಊರಿನ ಸ್ಥಳ ನಾಮ ವಿವರಗಳು ಅವುಗಳ ಆಳ ವಿಸ್ತಾರಕ್ಕೆ ಪ್ರವೇಶಿಸಿದಂತೆ ಅವುಗಳನ್ನು ಒರೆಹಚ್ಚಿ ನೋಡಿದಂತೆ ಸ್ಥಳನಾಮ ಸಂಶೋಧಕರಿಗೆ ಅಪರಿಮಿತವಾದ ಸತ್ಯದ ತಿರುಳನ್ನು ಸ್ಥಳನಾಮಗಳು ದೊರಕಿಸಿಕೊಡುತ್ತದೆ.[೩] ಸ್ಥಳನಾಮ ಅಧ್ಯಯನ ಮೊದಲು ಆರಂಭವಾದದ್ದು ಪಾಶ್ಚಾತ್ಯ ರಾಷ್ಟ್ರದಲ್ಲಿ ಎಂಬುದು ಖಚಿತವಾದ ಸಂಗತಿಯಾಗಿದೆ. ಕ್ರಿ.ಶ. ೧೭೬೮ರಲ್ಲಿ ಜರ್ಮನಿಯ ಗಾಟ್‌ಫ್ರೀಡ್ ವಿಲ್‌ಹೆಲ್ಮ್ ಲೀಬ್ನಿಜ್ ಆಂಗ್ಲ ಸ್ಥಳನಾಮದ ಬಗ್ಗೆ ಮೊದಲಿಗನಾದರೆ ಭಾರತದಲ್ಲಿ ಸ್ಥಳನಾಮ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿಕೊಟ್ಟ ಕೀರ್ತಿ ಎಚ್.ಡಿ. ಸಂಕಾಲಿಯಾ ಅವರಿಗೆ ಸಲ್ಲುತ್ತದೆ.

'ದಾವಣಗೆರೆ' ಎನ್ನುವ ಹೆಸರು ಹೇಗೆ ಬಂದಿತ್ತು. ಎನ್ನುವುದಾದರೆ ಸ್ಥಳನಾಮದ ನಿಷ್ಪತ್ತಿಯನ್ನು ಹೀಗೆ ಅರ್ಥೈಸಿದ್ದಾರೆ. ಒಂದು ಸಾವಿರ ವರ್ಷಗಳ ಹಿಂದೆ ಈ ಊರು ಅಸ್ಥಿತ್ವಕ್ಕೆ ಬಂದಿರಬಹುದು ಎಂದು ಹೇಳಲು ಬೇತೂರಿನ ವರ್ತಕ 'ದೇವಿಸೆಟ್ಟಿ' ಎನ್ನುವ ಶಿವಭಕ್ತ ತ್ರಿಭುವನೇಶ್ವರ

ದೇವರಿಗೆ ದಾನ ನೀಡಿದ ಹೊಲಗಳ ಸ್ಥಳವೇ ದಾವಣಗೆರೆ ಎಂದು ತಿಳಿಯಲು ಸಾಧ್ಯವಾಗಿದೆ. ಮತ್ತು ಬೇತೂರು ರಾಜಧಾನಿಯಾಗಿದ್ದಾಗ ಅಥವಾ ಪ್ರಮುಖಸ್ಥಳವಾಗಿದ್ದಾಗ ಈ ದೇವಿಸೆಟ್ಟಿ ಪ್ರಮುಖನಾಗಿರಬೇಕು. ಒಂದು ವಿಶೇಷವೆಂದರೆ 'ಕನ್ನಡ' ಎನ್ನುವ ಶಬ್ದ ಆನೆಕೊಂಡದ ಒಂದು ಶಾಸನದಲ್ಲಿ ಪ್ರಯೋಗವಾಗಿದೆ. ೧೧-೧೨ನೇ ಶತಮಾನದ ವೇಳೆಗೆ ಕುಗ್ರಾಮವಾಗಿ, ಸಣ್ಣ ಹಳ್ಳಿಯಾಗಿ ದಾವಣಗೆರೆಯು ಒಂದು ಸಾಧಾರಣ ಮಟ್ಟಿಗೆ ಊರಾಗಿ ಬೆಳೆಯುದರ ಜೊತೆಗೆ ಒಂದು 'ಸೀಮೆ' ಯಾಗಿತ್ತು[೪] ಎಂದು ಹೇಳಲು ತುಂಬಿನ ಹಳ್ಳಿಯ ಹೊಲದೊಳಗೆ ದಾವಣಗೆರ್ಯ ಸೀಮೆಯಂ.....ಎಂದು ಕ್ರಿ.ಶ. ೧೧೨೧ರ ಕಾಲದ ದಾವಣಗೆರೆಯ ೩ನೇ ಶಾಸನದಲ್ಲಿ ಪ್ರಪ್ರಥಮವಾಗಿ ದಾವಣಗೆರೆಯ ಹೆಸರು ಉಲ್ಲೇಖಗೊಂಡಿದೆ. 'ಸೀಮೆ'[೫] ಎಂದರೆ ಅನೇಕ ಹಳ್ಳಿಗಳನ್ನು ಒಳಗೊಂಡ ಊರು ಎಂದು ತಿಳಿಯಬಹುದಾಗಿದೆ. ಹೊರಗಿನವರೇ ಇಲ್ಲಿ ಬಂದು ನೆಲಸಲು ಈ ವಿಭಾಗದಲ್ಲಿ ಬಯಲು ಪ್ರದೇಶ ನೀರು ಹಸಿರಿನಿಂದ ಉತ್ತಮವಾಗಿತ್ತು. ಹೀಗೆ ಪ್ರಯಾಣಿಸುವರು ಬಹುಶಃ ವರ್ತಕರಿರಬೇಕು. ದಾವಣಗೆರೆಯ ೨ನೇ ಶಾಸನದಲ್ಲಿ (ಕ್ರಿ.ಶ.೧೧೨೪ರ ಕಾಲದಲ್ಲಿ) 'ವಣಿಗರ ದೇವನಗರಿಯಂ' ಎಂದು ಉಲ್ಲೇಖಿಸಿದೆ.

ದಾವಣಗೆರೆ ಪರಿಸರದಲ್ಲಿ ನೂರಾರು ದೇವಾಲಯಗಳು ಕಂಡುಬರುತ್ತವೆ, ಇಲ್ಲಿ ಹಲವು ದೇವಾಲಯಗಳು ಇದರಿಂದ ಮೊದಲು ದೇವನಕೆರೆ ಎಂದು ಕರೆಯಲಾಗಿದೆ. ಕ್ರಮೇಣ ದಾವಣಗೆರೆಯಾಗಿದೆ ಹಾಗೆಯೇ ಉಚ್ಚಂಗಿದುರ್ಗ ಆಳ್ವಿಕೆ ಮಾಡುತ್ತಿದ್ದ ತ್ರಿಭುವನ ಮಲ್ಲ ಪಾಂಡ್ಯನು ತನ್ನ ಹೆಸರಿನ ಶಿಬಾರದ ಬಳಿ ಕೆರೆಯೊಂದನ್ನು ಕಟ್ಟಿಸಿದನ್ನು ಇದನ್ನು ಶಾಸನವು 'ಕದಂಬದೇಸ ಸಹಸ್ರಾಂತರ್ಗತ ಬೆಳ್ತೂರು ದ್ವಾದಶ ಮಧ್ಯೆ ಬೆಳ್ತೂರು ಸೀಮಾಂತರ್ಗತ ಚಾಳುಕ್ಯ ಸಮುದ್ರಂ ನಾಮ ತಟಾಕಂ' ಎಂದು ವರ್ಣಿಸಿದೆ. ತ್ರಿಭುವನ ಮಲ್ಲ ಪಾಂಡ್ಯನನ್ನೇ ತ್ರಿಭುವನ ಮಲ್ಲದೇವ ಎಂದು ಶಾಸನಗಳು ಉಲ್ಲೇಖಿಸಿವೆ. ತ್ರಿಭುವನ ಮಲ್ಲದೇವನ್ನು ತನ್ನ ಹೆಸರಿನಲ್ಲಿಯೇ ಕಟ್ಟಿಸಿದ ಕೆರೆ ಸಮೀಪದಲ್ಲಿ ದಾವಣಗೆರೆ ಗ್ರಾಮವು ಇರಬಹುದಾಗಿದೆ. ಆ ಕೆರೆಯ ಬಳಿ ದಾವಣಗೆರೆ ಗ್ರಾಮ ಇದ್ದುದರಿಂದ ದೇವನಕೆರೆ ಎಂದು ಮೊದಲಿಗೆ ಕರೆದಿರಬಹುದಾಗಿದೆ. ನಂತರ ದೇವನಕೆರೆ ಹೋಗಿ ದಾವಣಗೆರೆ ಆಗಿರಬೇಕು.[೬]

ಶ್ರೀ.ಹಿ.ಚಿ. ಶಾಂತವೀರಯ್ಯನವರು ದಾವಣಗೆರೆಯನ್ನು ಹೀಗೆ ವಿವೇಚಿಸಿದ್ದಾರೆ.

ದಾವಣ + ಕೆರೆ ದವಣಿ = ಹಗ್ಗ, ಕಣ್ಣಿ ದಾವ = ಅಡವಿ, ಕಾಡು. ಕಟ್ಟುವ ಹಗ್ಗ

ದಾವಣ = ದಾಪಣಿ, ಸಂಸ್ಕೃತ ದಾಮನಿ = ದವಣಿ = ಗುಂಪು = ಸಮೂಹ

ಕೆರೆ ಪ್ರವಾಹವನ್ನು ತಡೆದು ಏರಿ ಹಾಕಿ ನಿಲ್ಲಿಸಿದ ಪ್ರದೇಶ. ದೇವನಕೆರೆ = ದೇವ ಒಂದು ಹೆಸರು.

ಈ ಹೆಸರಿನ ಸೂಚಕವಾಗಿ ಕಟ್ಟಿದ ಕೆರೆ ಅಥವಾ ದೇವಕಟ್ಟಿದ ಕೆರೆ.

ದಾವಣ – ದ್ಯಾವನ – ದಾವನ – ಕೆರೆ,

ದಾವನ + ಕೇರಿ. ದಾವ ಎಂಬುವನ ಕೇರಿ

ದಾವ + ನಗರಿ, ನಗರಿ = ನಗರಗಳಲ್ಲಿ (ದೊಡ್ಡೂರು)

ದೇವನಕೇರಿ = ದೆವರು ನೆಲೆಸಿದ ಬೀದಿ, ರಸ್ತೆ, ಸ್ಥಳ.

ಹೀಗೆ ದೇವಣಕೆರೆ – ದ್ಯಾವನಕೆರೆ ದ್ಯಾವನಗೆರೆ – ದ್ಯಾವಣಗೆರೆ – ದಾವಣಗೆರೆ, ಎಂದು ಹೆಸರಾಗಿದೆ ಎಂದಿದ್ದಾರೆ.[೭]

ಚಿತ್ರದುರ್ಗದ ಸಂಶೋಧಕರಾದ ಶ್ರೀ ಬಿ.ರಾಜಶೇಖರಪ್ಪನವರು ದಾವಣಗೆರೆ ದಾವಣ + ಕೆರೆ ಎಂಬ ಎರಡುಭಾಗಗಳಿಂದ ಕೂಡಿದೆ. ದಾವಣ ಎಂಬುದು 'ದಾವಣಿ' ಅರ್ಥದ ಶಬ್ದವಾಗಿಲ್ಲ. ಎಂದು ಅಭಿಪ್ರಾಯಪಡುತಾರೆ. ಇವರು ಮಂಡ್ಯ ಜಿಲ್ಲೆಯ ನಾಗಮಂಗಲದ ೧೨ನೇ ಶತಮಾನದ ದಾನ ಶಾಸನ ಒಂದರಲ್ಲಿ ದಾವಂಣ್ಣನಕೇರೆ ಎಂದು ಉಲ್ಲೇಖವಿರುವ ಕಾರಣ ದಾವಣಗೆರೆ ಜಿಲ್ಲೆಯ ದಾವಣಗೆರೆ ಸಹ 'ದಾವಣ'[೮] ಎನ್ನುವ ವ್ಯಕ್ತಿಯೊಬ್ಬನ ಹೆಸರಿನ ಊರಾಗಿರಬೇಕು ಎನ್ನುವ ಅಭಿಪ್ರಾಯ ಇಟ್ಟುಕೊಂಡಿದ್ದಾರೆ. ಆದರೆ ಈ ದಾವಣ ಎನ್ನುವ ವ್ಯಕ್ತಿಗೂ, ದಾವಣಗೆರೆ ಸ್ಥಾಪನೆಗೂ ಸಂಬಂಧಿಸಿದ ಯಾವುದೇ ಉಲ್ಲೇಖಗಳು ಇದುವರೆಗೂ ಕಂಡುಬಂದಿರುವುದಿಲ್ಲ. ಆದ್ದರಿಂದ ಜಾಲಿನಗರದ ಕೆರೆಯಿಂದಲೇ ದಾವಣಗೆರೆ ಪ್ರಾರಂಭವಾಯಿತು ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

## ೨.೩ ಪ್ರಾಗಿತಿಹಾಸ

ಆದಿಮಾನವನ ಹಂತದಿಂದ ನಾಗರಿಕ ಹಂತಕ್ಕೆ ತಲುಪುವರೆಗಿನ ಕಾಲಾವಧಿಯನ್ನು ಇಲ್ಲವೇ ಲಿಖಿತ ರೂಪದ ಆಧಾರಗಳು ದೊರೆಯದೆ ಕೇವಲ ಪುರಾತತ್ವ ಅವಶೇಶಗಳ ಸಹಾಯದಿಂದ ಆಯಾ ಕಾಲಘಟ್ಟದ ಜೀವನಕ್ರಮ ಅಧ್ಯಯನ ಮಾಡುವುದೇ ಪ್ರಾಗ್ ಇತಿಹಾಸವಾಗಿದೆ. ದಾವಣಗೆರೆ ಜಿಲ್ಲೆಯು ಕರ್ನಾಟಕದ ಮಧ್ಯಭಾಗದಲ್ಲಿದ್ದು ಸಂಸ್ಕ್ರತಿಗಳ ಕೊಂಡಿಯಂತೆ ಕಾರ್ಯನಿರ್ವಹಿಸುತ್ತಿದೆ. ಕರ್ನಾಟಕದ ಇತಿಹಾಸದಲ್ಲೇ ವಿಶಿಷ್ಟ ಸ್ಥಾನವನ್ನು ಪಡೆದಿರುವ ದಾವಣಗೆರೆ ಜಿಲ್ಲೆಯು ಪ್ರಾಗೈತಿಹಾಸಿಕವಾಗಿ ಮಹತ್ವ ಪಡೆದಿರುವ ಹಂತ ನೋಡಬಹುದಾಗಿದೆ. ಇತಿಹಾಸ ರಚನೆಗೆ ಬರವಣಿಗೆ ರೂಪದ ಆಧಾರಗಳು ದೊರೆಯದೆ ಇದ್ದ ಸಂದರ್ಭದಲ್ಲಿ ಪ್ರಾಚೀನ ಮಾನವನು ನಿರ್ಮಿಸಿ ಉಪಯೋಗಿಸಿ ಬಿಟ್ಟು ಹೋದಂತಹ ಅವಶೇಷಗಳನ್ನು ಬಳಸಿಕೊಂಡು ಇತಿಹಾಸವನ್ನು ರಚಿಸಬಹುದಾಗಿದೆ. ಇದನ್ನು ಪ್ರಾಗಿತಿಹಾಸವೆಂದು ಕರೆಯಲಾಗಿದೆ. ಪ್ರಾಚೀನ ಮಾನವನಿಂದ ನಿರ್ಮಾಣಗೊಂಡ ಅವಶೇಷಗಳಾದ ಶಿಲಾಯುಧಗಳು, ಮಡಿಕೆಗಳು, ಆಟಿಕೆ ವಸ್ತುಗಳು, ಆಭರಣಗಳು, ಗುಹಾವರ್ಣಚಿತ್ರಗಳು ಇತ್ಯಾದಿಗಳು ಪ್ರಾಗಿತಿಹಾಸ ರಚನೆಯಲ್ಲಿ ಪ್ರಮುಖ

ಪಾತ್ರವಹಿಸುತ್ತದೆ. ಈ ಕಾಲದ ಗ್ರಂಥ ಆಕರಗಳು ತೀರ ಕಡಿಮೆಯಾಗಿದ್ದು, ಅಷ್ಟಾಗಿ ಉಪಯುಕ್ತವಾಗಿರದ ಸ್ಥಿತಿಯಲ್ಲಿ ಪುರಾತತ್ವ ಆಕರಗಳು ತಕ್ಕ ಮಟ್ಟಿಗೆ ಆಶಾದಾಯಕವಾಗಿದೆ. ಇಂದಿನ ಕರ್ನಾಟಕದಲ್ಲಿ ಪ್ರತಿಯೊಂದು ನದಿ ಬಯಲುಗಳಲ್ಲಿ ಆದಿ ಹಳೆಶಿಲಾಯುಗ ನೆಲೆಗಳಿವೆ.

**ಹಳೆ ಶಿಲಾಯುಗ**

ದಕ್ಷಿಣ ಭಾರತದ ಪ್ರಾಗಿತಿಹಾಸ ಅಧ್ಯಯನಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಪ್ರಸಿದ್ಧ ಭೂಗರ್ಭಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್‌ಫೂಟ್‌ರವರಿಗೆ ಸಲ್ಲುತ್ತದೆ. ಈ ಭಾಗದಲ್ಲಿ ಸಂಚರಿಸಿ ಅನೇಕ ಪ್ರಾಚ್ಯಾವಶೇಷಗಳನ್ನು ಪತ್ತೆಹಚ್ಚಿದ್ದಾರೆ. ತುಂಗಭದ್ರ ನದಿ ಸಮೀಪದ ದಾವಣಗೆರೆ ಪರಿಸರದ ಹೊನ್ನಾಳಿಯ ತಾಲೂಕಿನ ನ್ಯಾಮತಿ, ಲಿಂಗದಹಳ್ಳಿ, ಹಾಡೋನಹಳ್ಳಿ, ಗೋವಿನಕೋವಿ, ಚಿಕ್ಕಬಸೂರು ನೆಲೆಗಳು ಹಳೆ ಶಿಲಾಯುಗದ ಮಾನವನ ವಸತಿ ನಿವೇಶನವಾಗಿದ್ದವು ಎನ್ನುವುದನ್ನು ದೃಢೀಕರಿಸಿದ್ದಾರೆ.[೯] ಈ ಪರಿಸರವು ವಿಶಿಷ್ಟ ಭೌಗೋಳಿಕ ಪ್ರದೇಶವನ್ನು ಹೊಂದಿದ್ದು, ಆದಿಮಾನವನ ವಾಸ ಯೋಗ್ಯವಾದ ಪ್ರದೇಶವಾಗಿದೆ. ಜಿಲ್ಲೆಯ ಉದ್ದಗಲಕ್ಕೂ ಬೆಟ್ಟ ಗುಡ್ಡಗಳ ಸಾಲುಗಳನ್ನು ಹೊಂದಿದೆ. ಹಳ್ಳ, ಕೊಳ್ಳ, ಜೀವನದಿಗಳ, (ತುಂಗಭದ್ರ ನದಿ) ಪ್ರಾಗಿತಿಹಾಸ ನೆಲೆಗಳು ಕಂಡು ಬರುತ್ತವೆ. ಉಚ್ಚಂಗಿ ಗುಡ್ಡ ಸಾಲು, ಕೊಮಾರನಹಳ್ಳಿಯಿಂದ ಆರಂಭವಾಗುವ ಹಾಲಿವಾಣ ಗುಡ್ಡ ಸಾಲುಗಳು, ಅಣಜಿ ಗುಡ್ಡಗಳು, ಮಾಯಕೊಂಡದಿಂದ ಆರಂಭವಾಗುವ ಗುಡ್ಡಗಳು, ತಿಮ್ಮಪ್ಪನ ಗುಡ್ಡ, ನರಗನಹಳ್ಳಿಯ ಗುಡ್ಡ, ಕರಡಿ ಗುಡ್ಡ, ನೀರ್ಥಡಿ ಗುಡ್ಡ, ಜೇನು ಮಟ್ಟಿ, ಹಂದಿ ಗುಡ್ಡ, ಗಾಳಿಮಟ್ಟಿ, ನಿಶಾನಿ ಗುಡ್ಡ, ಆಲೆಕಲ್ಲು ಗುಡ್ಡ, ಬಾತಿ ಗುಡ್ಡ, ಕಲ್ಲಾಸರೆಯ ಗುಹೆಗಳನ್ನು ಹೊಂದಿದ್ದು ಗುಡ್ಡದ ತಪ್ಪಲು ಪ್ರದೇಶಗಳಲ್ಲಿ ನೀರಿನ ನೆಲೆ ಇದ್ದು, ಆದಿಮಾನವನ ವಾಸಿಸಲು ಯೋಗ್ಯವಾದ ನೆಲೆಗಳಾಗಿವೆ. ಜಿಲ್ಲೆಯ ವಾಯುವ್ಯ ಭಾಗದಲ್ಲಿ ಅರೆಮಲೆನಾಡಿನಂತಿರುವ ಪ್ರದೇಶದಲ್ಲಿ ಕೆಲವು ಬೋಳು ಬೆಟ್ಟಗುಡ್ಡಗಳ ಸಾಲುಗಳು ಕಂಡುಬರುತ್ತದೆ, ಮೇಲ್ಭಾಗದಲ್ಲಿ ವಿಶಾಲವಾದ ಮೈದಾನಗಳಿವೆ. ಅಲ್ಲಿ ಆದಿ ಮಾನವನ ಶಿಲಾಯುಧಗಳು ಹೇರಳವಾಗಿ ಸಿಕ್ಕಿವೆ. ಇಲ್ಲಿನ ಗುಡ್ಡ ಸಾಲುಗಳ ತಪ್ಪಲು ಪ್ರದೇಶ ಫಲವತ್ತಾದ ಮೆಕ್ಕಲು ಮಣ್ಣನ್ನು ಹೊಂದಿವೆ. ಅವು ನೀರಿನ ನೆಲೆ ಹೊಂದಿರುವುದರಿಂದ ಕೃಷಿ ಆರಂಭವಾಗಿರಬಹುದಾಗಿದೆ.

ಬಸವಾಪಟ್ಟಣದ ಹಾಲಸ್ವಾಮಿ ಬೆಟ್ಟದ ಗುಹಾಂತರ ದೇವಾಲಯವು ಆದಿಮಾನವ ನೆಲೆಸಿದ ಸ್ಥಳವಾಗಿರಬಹುದು. ೧೮೮೧ರಲ್ಲಿ ಸಿಂಗಲ್‌ಬೆಡ್ ಎಂಬುವರು ತುಂಗಭದ್ರ ನದಿ ಸಮೀಪದ ನ್ಯಾಮತಿಯಲ್ಲಿ ಆದಿ ಶಿಲಾಯುಗಕ್ಕೆ (ಅರ್ಲಿ ಸ್ಟೋನ್ ಏಜ್ ಟೂಲ್ಸ್) ಸೇರಿದ ಎರಡು ಶಿಲಾಯುಧಗಳನ್ನು ಸಂಶೋಧಿಸಿದರು. ಅಲ್ಲಿ ದೊರೆತ ಕ್ವಾರ್ಟ್‌ಜೈಟ್‌ನಿಂದ ತಯಾರಿಸಿದ ಕೈ ಕೊಡಲಿಗಳು ಮುಂಭಾಗ ಚೂಪಾಗಿಯೂ, ಹಿಂಭಾಗದಲ್ಲಿ ವೃತ್ತಾಕಾರವಾಗಿ ಹಾಗೂ ಬಾಯಿ ಹರಿತವಾಗಿಯೂ ಇದ್ದವು ಮತ್ತು ಅದನ್ನು ವಿಭಿನ್ನ ಕೆಲಸಗಳಿಗೆ ಬಳಕೆ ಮಾಡಿದ್ದಾರೆನ್ನಬಹುದು.[೧೦]

ಆದಿಮಾನವ ತುಂಗಭದ್ರ ನದಿ ದಂಡೆಯ ಪ್ರದೇಶದಲ್ಲಿ ಕೃಷಿಯನ್ನು ಕಂಡು ಕೊಂಡ ನಂತರ ಬಹುಶಃ ನದಿ ಬಯಲನ್ನು ಆಶ್ರಯಿಸಿರಬಹುದು. ಶ್ಯಾಗಲೆ ಹಳ್ಳದ ದಂಡೆಯಲ್ಲಿ ಬರುವ ನೆಲೆಗಳಾದ ಕಂದಗಲ್ಲು, ಹೂವಿನಮಡು, ಕುಕ್ಕವಾಡ, ಬಟ್ಟಲಕಟ್ಟೆ, ಮುದಹದಡಿ, ಗುಮ್ಮನೂರ ಹಳ್ಳ, ಬಸಾಪುರ ಹಳ್ಳ, ಹರಿದ್ರಾವತಿ, ಹಿರೇಹಳ್ಳ, ಸೊಪ್ಪಿನಹಳ್ಳ, ಹಗರಿ, ಜಿನಗಿ ಹಳ್ಳ, ತೀರ್ಥರಾಮೇಶ್ವರ ಹಳ್ಳ, ಹೊಟ್ಟೆಗ್ಯಾನಹಳ್ಳಿ, ಎರೆಹಳ್ಳಿ, ವಡ್ನಾಳುಹಳ್ಳಿ ಇನ್ನು ಮುಂತಾದ ನೂರಾರು ಕೆರೆ ತೊರೆಗಳು ನದಿ ಹಳ್ಳಗಳು ಆದಿ ಮಾನವನಿಗೆ ನೆಲೆ ನೀಡಿರಬಹುದು.[೧೧]

**ಸೂಕ್ಷ್ಮ ಶಿಲಾಯುಗ**

ಹಳೆಯ ಶಿಲಾಯುಗದ ನಂತರದ ಕಾಲವನ್ನು ಸೂಕ್ಷ್ಮಶಿಲಾಯುಗವೆಂದು ಕರೆಯಲಾಗಿದೆ. ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೩೯ರ[೧೨] ವೇಳೆಗೆ ಬೆಳಕಿಗೆ ಬಂದ ನಂತರ, ಅಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ಆರಂಭವಾಯಿತು. ೧೯೫೬ರ ನಂತರವೇ ಈ ಹಂತದಲ್ಲಿ ಜೀವಿಸಿದ್ದ ಮಾನವನು ತನ್ನ ಜೀವನ ನಿರ್ವಹಣೆಗೆ ಅತ್ಯಂತ ಸೂಕ್ಷ್ಮ ಅಂದರೆ ೧ ರಿಂದ ೫ ಸೆ.ಮೀ.ಗಾತ್ರದ ಶಿಲಾಯುಧಗಳನ್ನು ಬಳಸಿರುವುದೇ ಹೀಗೆ ಹೆಸರಿಸಲು ಕಾರಣವಾಗಿದೆ. ಹಾಗೆಯೇ ತನ್ನ ಜೀವನದ ವಿಕಾಸದ ಹಂತದಲ್ಲಿ ತುಂಬಾ ಮಹತ್ತರ ಬದಲಾವಣೆಯನ್ನು ಈ ಹಂತದಲ್ಲಿ ಕಂಡುಕೊಂಡಿದ್ದರಿಂದ ಇದನ್ನು ಸ್ಥಿತ್ಯಂತರಯುಗವೆಂತಲೂ ಕರೆಯಲಾಗಿದೆ. ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಿಸಿದಂತೆ ದಾವಣಗೆರೆ ಪ್ರದೇಶದಲ್ಲಿ ಹೆಚ್ಚಿನ ನೆಲೆಗಳು ದೊರೆತಿವೆ. ಕೊಂಡಜ್ಜಿ, ಮೂಡಲಗೇರಿ, ಹಳಸಬಾಳು, ಕೋನಾಯಕನಹಳ್ಳಿ, ಚಿಕ್ಕಬಸೂರು, ತಕ್ಕನಹಳ್ಳಿ, ನ್ಯಾಮತಿ, ಬೆನಕನಹಳ್ಳಿ, ಸಲಬಾಳು, ಸಾಸಿವೆಹಳ್ಳಿ, ಹರಪನಹಳ್ಳಿ, ಹರಳಹಳ್ಳಿ, ಹಳೇಚೆಟ್ನಹಳ್ಳಿ, ಹಳೇಲಿಂಗಾಪುರ (ದಾವಣಗೆರೆ), ಇತ್ಯಾದಿ ನೆಲೆಗಳಾಗಿವೆ.

ಸೂಕ್ಷ್ಮ ಶಿಲಾಯುಗದಲ್ಲಿ ಆಹಾರ ಸಂಗ್ರಹಕ್ಕಾಗಿ ಮತ್ತು ಇತರೆ ಚಟುವಟಿಕೆಗಳಿಗಾಗಿ ಬಹಳ ಸಣ್ಣ ಕಲ್ಲಿನ ಆಯುಧಗಳನ್ನು ಮಾನವ ಮಾಡಿಕೊಂಡನು. ದಾವಣಗೆರೆ ಪರಿಸರದ ಕೊಂಡಜ್ಜಿಯಲ್ಲಿ ಪತ್ತೆಯಾದ ವರ್ಣ ಚಿತ್ರಗಳು ವಿವಿಧ ಮಾದರಿಯ ಉಪಕರಣಗಳು, ಮಾಡಲಗೆರೆಯ ವಿವಿಧ ಮಾದರಿ ಉಪಕರಣಗಳು, ಹಲಸಬಾಳುವಿನ ಹೆರೆಚಕ್ಕೆ ಮೊನೆ ಹಾಗೂ ನೀಳ ಚಕ್ಕೆಗಳು, ಕೋನಾಯಕನಹಳ್ಳಿಯ ಹೆರೆಚಕ್ಕೆ ಮೊನೆ ಮಾದರಿಯ ಉಪಕರಣಗಳು, ಚಿಕ್ಕ ಬಾಸೂರಿನಲ್ಲಿ ದೊರೆತ ಹೆರೆಚಕ್ಕೆ ಉಪಕರಣಗಳು, ತಕ್ಕನಹಳ್ಳಿಯ ನೀಳಚಕ್ಕೆ ಹೆರೆಚಕ್ಕೆ ಅಜ್ಯಾಮಿತಿಯ ಆಕಾರ ಹೊಂದಿದೆ. ಸಾಸ್ವೆಹಳ್ಳಿಯ ಅಜ್ಯಾಮಿತಿಯ ಹೆರೆಚಕ್ಕೆ, ನೀಳಚಕ್ಕೆ, ಮೊನಚು, ಸುರಹೊನ್ನೆಯ ಹೆರೆಚಕ್ಕೆ, ಮೊನಚಾದ ಉಪಕರಣಗಳು, ಹನಗನವಾಡಿಯ ಅಜ್ಯಾಮಿತಿಯ ಉಪಕರಣಗಳು, ಹರಗನಹಳ್ಳಿಯ ನೀಳಚಕ್ಕೆ, ಹೆರೆಚಕ್ಕೆ ಉಪಕರಣಗಳು, ಹರಳಹಳ್ಳಿ, ಹಳೇಹರಳಹಳ್ಳಿ, ಹಳೇಚಟ್ನಹಳ್ಳಿ, ಹಳೆಲಿಂಗಾಪುರ ಹಾಗೂ ನ್ಯಾಮತಿಯಲ್ಲಿ ದೊರೆತ ವಿಶೇಷವಾದ ನೀಳಚಕ್ಕೆ, ಹೆರೆಚಕ್ಕೆ, ಮೊನಚಾದ ಉಪಕರಣಗಳು ದೊರೆತಿವೆ.

ದಾವಣಗೆರೆ ಈಶಾನ್ಯಭಾಗದಲ್ಲಿ ಈ ಸಂಸ್ಕೃತಿಗೆ ಸಂಬಂಧಪಟ್ಟಂತೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

**ನೂತನ ಶಿಲಾಯುಗ**

ಈ ಸಂಸ್ಕೃತಿಯ ಹಂತವನ್ನು ಗುರುತಿಸುವಾಗ ಉಜ್ಜಿನಯಗೊಳಿಸಿದ ಮೇಲ್ಮೈಯುಳ್ಳ ಕೊಡಲಿಗಳು ಹಾಗೂ ಬೂದುವರ್ಣದ ಮಡಿಕೆಗಳು ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಈ ಉಪಕರಣಗಳು ಪ್ರಾಚೀನ ಶಿಲಾಯುಧಗಳಂತೆ ಬುರುಕಾಗಿಲ್ಲ ಅಲ್ಲದೆ ಆಗಲೇ ಆರಂಭವಾಗಿದ್ದ ಪಶುಪಾಲನೆ ಮತ್ತು ಕೃಷಿ ಅಭಿವೃದ್ಧಿ ಹೊಂದಿದ್ದವು. ಬೂದುವರ್ಣದ ಪಾತ್ರೆಗಳ ತಯಾರಿಕೆ, ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣದೊಂದಿಗೆ ಒಂದು ರೀತಿಯ ಪರಸ್ಪರ ಅವಲಂಬನೆಯ ಆಧಾರದ ಮೇಲೆ ಒಟ್ಟಾಗಿ ವಾಸಿಸುವ ಜನರು ತಮ್ಮ ದೈನಂದಿನ ಕಾರ್ಯ ವಿಭಜನೆ ಮಾಡಿಕೊಳ್ಳುತ್ತ ಜೀವಿಸುತ್ತಿದ್ದರು. ಇದನ್ನು ಆರಂಭಿಕ ಸಂಘಟಿತ ಸಮಾಜವೆಂದು ಕರೆಯಲಾಗಿದೆ.[೧೩] ನೂತನ ಶಿಲಾಯುಗದ ನೆಲೆಗಳಲ್ಲಿ ಆದಿಮಾನವನು ತನ ಚಟುವಟಿಕೆಗಳಿಗೆ ನುಣುಪಾದ ಹೊರಮೈಯುಳ್ಳ ವಿವಿಧ ಉಪಕರಣಗಳನ್ನು ಕಂಡುಕೊಂಡ. ಈ ಕಾಲದ ನೆಲೆಗಳು ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲೂಕಿನಲ್ಲಿ ಹೆಚ್ಚಾಗಿ ಕಂಡು ಬಂದಿರುತ್ತವೆ. ಹರಪನಹಳ್ಳಿ ತಾಲ್ಲೂಕು. ಮಾಡಲಗೆರೆಯಲ್ಲಿ ಶಿಲೋಪಕರಣಗಳು ಬೂದುಬಣ್ಣದ ಮಡಕೆ ಭಾಗಗಳು ದೊರೆತಿವೆ. ಸಾಸ್ವೆಹಳ್ಳಿಯಲ್ಲಿ ಕಪ್ಪು, ಕಂದು ವರ್ಣದ ಮಡಕೆಯ ಭಾಗಗಳು ದೊರೆತಿವೆ. ಹರಗನಹಳ್ಳಿಯಲ್ಲಿ ಕಂದು ಮತ್ತು ಕಪ್ಪು ವರ್ಣದ ಹೊಳಪುಳ್ಳ ಕಂದು ವರ್ಣದ ಬಿಳಿ ಮಿಶ್ರಿತ ಕಪ್ಪು ಮತ್ತು ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ. ಹಾಡೋನಹಳ್ಳಿಯಲ್ಲಿ ಉಂಗುರ ಕಲ್ಲು ವಿವಿಧ ವರ್ಣದ ಮಡಕೆ ಭಾಗಗಳು ಕಂಡು ಬಂದಿವೆ. ಹೊಸಹಳ್ಳಿಯಲ್ಲಿ ಕಂದು, ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ. ದೊಡ್ಡಬಾತಿಯಲ್ಲಿ ಈ ಶಿಲಾಯುಗಕ್ಕೆ ಸೇರಿದ ಮಡಕೆ ಚೂರುಗಳು ಸಿಕ್ಕಿವೆ. ಇತ್ತೀಚಿಗೆ ಸಂಶೋಧಕರು ಈ ಶಿಲಾಯುಗದ ಹಲವಾರು ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.

**ಬೃಹತ್ ಶಿಲಾಯುಗ**

ವಿಶಿಷ್ಟ ಬಗೆಯ ಸಂಪ್ರದಾಯದಿಂದ ಕೂಡಿದ ಈ ಹಂತ ದಕ್ಷಿಣ ಭಾರತದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಸತ್ತವರಿಗಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ನಿಲ್ಲಿಸಿ ಗೋರಿಗಳ ನಿರ್ಮಾಣ ಕಾರ್ಯ ನಡೆದಿದ್ದರಿಂದ ಇದನ್ನು ಬೃಹತ್ ಶಿಲಾಯುಗವೆಂದು ಕರೆಯಲಾಗಿದೆ. ಶವಸಂಸ್ಕಾರಕ್ಕಾಗಿ ವಿವಿಧ ಸ್ಥಳಗಳಲ್ಲಿ ಕಂಡುಬಂದಿರುವ ನೂರಾರು ಕಲ್ಗೋರಿಗಳು ಈ ಸಂಸ್ಕೃತಿಯ ವೈಶಿಷ್ಟ್ಯವನ್ನು ತಿಳಿಸುತ್ತದೆ. ಅಲ್ಲದೆ ಅವುಗಳ ಶೋಧ, ಉತ್ಖನನಗಳಿಂದ ವಿವಿಧ ಪ್ರಕಾರದ ಗೋರಿಗಳನ್ನು ಗುರುತಿಸಲಾಗಿದೆ. ಇವುಗಳಲ್ಲಿ ದಾರಿಕೋಣೆ, ಕಿಂಡಿಕೋಣೆ, ಕೊರೆದು ತಯಾರಿಸಿದ ಶವಕುಣಿಗಳು, ಮಡಿಕೆಯ

ಶವಪೆಟ್ಟಿಗೆಗಳುಳ್ಳ ದುಂಡುವೃತ್ತಗಳು, ಕಲ್ಲುಗುಂಪೆಗಳು ಮೊದಲಾದ ಪ್ರಕಾರಗಲು ಈ ಪ್ರದೇಶದಲ್ಲಿ ಕಂಡುಬಂದಿರುತ್ತವೆ.

ಬೃಹತ್ ಶಿಲಾಯುಗದ ನೆಲೆಗಳು ದೊಡ್ಡ ಗಾತ್ರದ ಕಲ್ಲಿನ ಬಳಕೆ ಇವರ ಕಾಲದಲ್ಲಿ ಕಂಡುಬರುತ್ತದೆ. ಶವ ಸಂಸ್ಕಾರ ಪದ್ಧತಿ ವಿಶೇಷವಾಗಿದ್ದು, ಗೋರಿಗಳು ಶಿಲಾ ಸಮಾಧಿಗಳು ಮತ್ತು ನಿಲುಸಾಗಲ್ಲುಗಳು ಈ ಕಾಲದಲ್ಲಿಯೇ ನಿರ್ಮಾಣವಾಗಿವೆ. ಜಗಳೂರು ತಾಲ್ಲೂಕು. ಆಕನೂರಿನಲ್ಲಿ ನೆಲೆಯಿದ್ದು, ಮಡಕೆ ಮಾದರಿಗಳು ದೊರೆತಿವೆ. ಹರಪನಹಳ್ಳಿ ತಾ. ತೆಲಗಿ, ನೀಲಗುಂದ, ಮೂಡಲಕೇರಿ, ಹರಿಹರ ತಾ. ಕೊಕ್ಕನೂರು, ಕೊಮರಾನಹಳ್ಳಿಯಲ್ಲಿ ಗೋರಿ ನೆಲೆಗಳಿವೆ. ಕಲ್ಲುಗೋರಿಗಳು ದೊರೆತಿವೆ. ಇಲ್ಲಿ ಹರಪ್ಪ ಸಂಸ್ಕೃತಿಯ ಮಡಕೆ ಸಿಕ್ಕಿವೆ. ಹೊನ್ನಾಳಿ ತಾ. ಕಮ್ಮಾರಗಟ್ಟೆ, ಶಿಲಾವೃತ್ತಗಳು ಗೋರಿಗಳಿರುವ ಚಿನ್ನಿಕಟ್ಟೆ ಈ ಶಿಲಾಯುಗದ ವಾಸ್ತವ್ಯದ ನೆಲೆಯಿರುವ ಕಪ್ಪು, ಕೆಂಪು ಮತ್ತು ಕಪ್ಪು ವರ್ಣದ ಮಡಕೆ ಭಾಗಗಳು ದೊರೆತಿರುವ ದಿಡಗೂರು, ಬನ್ನಿಕೋಡು, ಬೆನಕನಹಳ್ಳಿ ಗೋರಿಯ ನೆಲೆಯಿರುವ ಕಪ್ಪು, ಕೆಂಪ್ಪು ವರ್ಣದ ಮಡಕೆ ಭಾಗಗಳು ಗೀಚುಗಳನ್ನು ಹೊಂದಿದ್ದು, ಪೂರ್ಣ ಕಪ್ಪು ವರ್ಣದ ಮಡಕೆ ಭಾಗಗಳು ಗೀಚುಗಳನ್ನು ಹೊಂದಿದ್ದು, ಬೇಲಿ ಮಲ್ಲೂರು, ಸಾಸ್ವೆಹಳ್ಳಿ, ಸಿದ್ದಾಪುರ, ಸುಂಕದಕಟ್ಟೆಯಲ್ಲಿ ಗೋರಿಗಳು, ಕಲ್ಲುಗಪ್ಪೆಗಳು ದೊರೆಯುತ್ತವೆ. ಶಿಲಾವೃತ್ತಗಳು ಗೋರಿಗಳು ದೊರೆತಿರುವ ಸವಳಂಗ, ಹನುಮನಹಳ್ಳಿ, ಅರಗನಹಳ್ಳಿ ನಿಲುಸುಗಲ್ಲು, ಹಳೇ ಲಿಂಗಾಪುರ, ಕಲ್ಗೋರಿ ಹಾಗೂ ಆಯಾತಾಕಾರದ ಎರಡು ಕಲ್ಲುಗಪ್ಪೆಗಳು ದೊರೆತಿರುವ ಹಾಡೋನಹಳ್ಳಿ, ಹೊಸಹಳ್ಳಿ, ಕುಳಿಬರಿತ ಬೃಹತ್ ಗೋರಿ ದೊರೆತಿರುವ ಹಳೇ ಕುಂದುವಾಡ ಇತ್ತೀಚಿಗೆ ಪತ್ತೆಯಾದ ದೇವರಹಟ್ಟಿ ಬಳಿಯ ಬೃಹತ್ ಶಿಲಾಯುಗದ ನೆಲೆ, ಅಣಜಿ ಗುಡ್ಡದಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಕಂಡುಬಂದಿವೆ.[೧೪]

**ದೊಡ್ಡಬಾತಿಯ ಬೃಹತ್ ಶಿಲಾಯುಗದ ಶಿಲಾ ಸಮಾಧಿಗಳು :** ದಾವಣಗೆರೆ ಕಸಬಾಕ್ಕೆ ಸೇರಿದ ಗ್ರಾಮ ದೊಡ್ಡಬಾತಿಯಾಗಿದೆ. ಇಲ್ಲಿ ಶ್ರೀ ಸಿದ್ಧೇಶ್ವರ ಬೆಟ್ಟದ ತಪ್ಪಲಿನಲ್ಲಿ ಶಿಲಾಸಮಾಧಿ ಪತ್ತೆಯಾಗಿದೆ. ದೊಡ್ಡಬಾತಿಯ ಸಿದ್ಧೇಶ್ವರ ಗುಡ್ಡ ಹಾಗೂ ಕುಂದುವಾಡ ಗ್ರಾಮದ ನಡುವೆ ಬರುವ ಈ ಶಿಲಾ ಸಮಾಧಿಯು ಬೃಹತ್ ಕೆರೆ ಏರಿಯ ಹಿಂಭಾಗದಲ್ಲಿದೆ. ದೊಣ್ಣೆ ಕೆಂಚಮ್ಮ, ಹೊನ್ನಮ್ಮ, ಲಕ್ಷ್ಮಮ್ಮದೇವಿಯೆಂಬ ಹೆಸರುಗಳಿಂದ ಕರೆಯಲ್ಪಡುತ್ತಿರುವ ಈ ಸಮಾಧಿ ಇಂದಿಗೂ ಪೂಜೆಗೊಳ್ಳುತ್ತಿದೆ. ಪೂರ್ವಾಭಿಮುಖವಾಗಿರುವ ಈ ಸಮಾಧಿಗೆ ಕಂದುಬಣ್ಣದ ಹರಳುಕಲ್ಲು ಹಾಗೂ ಬಿಳಿ ಗ್ರಾನೈಟ್ ಶಿಲೆಯ ಬೃಹತ್ ಚಪ್ಪಡಿಗಳನ್ನು ಬಳಸಿ ನಿರ್ಮಿಸಿದ್ದಾರೆ. ಸ್ವಸ್ತಿಕ್ ಆಕಾರದಲ್ಲಿ ನಿಲ್ಲಿಸಿರುವ ಬೃಹತ್ ಚಪ್ಪಡಿಗಳು ಕಂದು ಹಾಗೂ ಬಿಳಿ ಬಣ್ಣದಿಂದ ಕೂಡಿದ್ದು, ೬ ಇಂಚು ದಪ್ಪ, ೫ ಅಡಿ ಎತ್ತರ, ೬ ಅಡಿ ಉದ್ದವಾಗಿವೆ.

ಅರ್ಧಚಂದ್ರಾಕಾರದ ರಂಧ್ರವಿರುವ ಮುಂದಿನ ಕಲ್ಲು ಚಪ್ಪಡಿ ಹೊಲವೊಂದರ ಬಾವಿಯ ಹತ್ತಿರ ಬಿದ್ದಿದೆ. ಪಶ್ಚಿಮ ದಿಕ್ಕಿನ ಗೋಡೆಯ ಕಲ್ಲಿನಲ್ಲಿ ಒಟ್ಟು ೨೧ ಕುಳಿಗಳಿವೆ. ೧ ಇಂಚು ಆಳ, ೨ ಇಂಚು ಅಗಲದ ಕುಳಿಗಳಿದ್ದು, ನಸುಗೆಂಪು ಹರಳು ಕಲ್ಲಿನ ಚಪ್ಪಡಿಯಲ್ಲಿ ಕೆತ್ತಿದ್ದಾರೆ. ಮೇಲೊದಿಕೆಯ ಬೃಹತ್ ಚಪ್ಪಡಿ ೭ ಅಡಿ ಉದ್ದ, ೬ ಅಡಿ ಅಗಲ, ೯ ಇಂಚು ದಪ್ಪವಿದೆ, ಶಿಲಾ ಸಮಾಧಿಯ ಸುತ್ತ ಕಲ್ಲುಪ್ಪೆಗಳಿದ್ದು, ಗುಂಡುಕಲ್ಲುಗಳನ್ನು ರಾಶಿ ಹಾಕಿದ್ದಾರೆ. ಬೂದು, ನಸುಗೆಂಪು ಬಣ್ಣದ ಮಡಕೆ ಚೂರುಗಳು, ಬಳೆಗಳು, ಮೂರು ಅಡಿಯ ಆಳದ ಒಳಪದರಿನಲ್ಲಿ ದೊರೆತಿವೆ. ಮಣ್ಣಿನ ಕೇಲನ್ನು (ಕಳಸ) ಹೋಲುವಂತಹ ಕುಡುಕೆಗಳು ಒಳಗಡೆ ಬಳೆ ಚೂರು ಹಾಗೂ ಬಿಳಿ ಬಣ್ಣದ ಬೂದಿ ದೊರೆತಿದೆ. ಸಮಾಧಿಯ ಸುತ್ತ ಆರು ಅಡಿ ಅಂತರದಲ್ಲಿ ತಲೆ ಬುರುಡೆ, ಮೂಳೆ ತುಂಬಿದ ಮಡಿಕೆ ಅವಶೇಷಗಳು ಕಂಡುಬಂದಿವೆ. ಕುಳಿಬರಿತ ಕಲ್ಲುಚಪ್ಪಡಿ ಮಡಿಕೆಯೊಳಗಿನ ಬಳೆ ಚೂರುಗಳು ಹೊನ್ನಮ್ಮ, ದೊಣ್ಣೆ ಕೆಂಚಮ್ಮ, ದೇವಿ ಮುಂತಾದ ಹೆಸರುಗಳಿಂದ, ಕೇಲಿನಂತಹ ಕುಡಿಕೆಗಳನ್ನು ಇವುಗಳನ್ನು ಗಮನಿಸಿದರೆ ಇದು ಮಹಿಳೆ ಶಿಲಾ ಸಮಾಧಿ ಆಗಿರಬಹುದಾಗಿದೆ.

### ೨.೪ ಇತಿಹಾಸ ಕಾಲ

ಐತಿಹಾಸಿಕ ಚೌಕಟ್ಟಿನಲ್ಲಿ ದಾವಣಗೆರೆ ನಗರವನ್ನು ಗುರುತಿಸಲು ಮುಂದಾದಾಗ, ದಾಖಲೆಗಳ ಕೊರತೆ ಕಂಡುಬರುತ್ತದೆ. ೧೧೨೧ರ ವರೆಗೂ ದಾವಣಗೆರೆ ನಗರದ ಹೆಸರನ್ನು ಉಲ್ಲೇಖಿಸುವ ಶಾಸನಗಳಾಗಲಿ ಅಥವಾ ಇತರೆ ಐತಿಹಾಸಿಕ ಕುರುಹುಗಳಾಗಲಿ ದೊರೆತಿಲ್ಲ. ಈ ಹಿನ್ನೆಲೆಯಲ್ಲಿ ನಗರದ ಐತಿಹಾಸಿಕ ಸ್ಥಾನಮನಗಳನ್ನು ಗುರುತಿಸಲು ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ದೊರೆತಿರುವ ಶಾಸನಗಳು ಅವಂಲಬಿಸಬೇಕಾಗಿದೆ. ದಾವಣಗೆರೆ ನಗರಕ್ಕೆ ತೀರ ಸಮೀಪದ ಗ್ರಾಮಗಳಲ್ಲಿ ಪ್ರಾಚೀನ ಮನೆತನಗಳಾದ ಮೌರ್ಯ, ಶಾತವಾಹನರಿಂದ ಮೊದಲುಗೊಂಡು, ಕನ್ನಡನಾಡಿನ ಬಹಳಷ್ಟು ಅರಸುಮನೆತನಗಳ ಶಾಸನಗಳು ದೊರೆಯುತ್ತದೆ, ಶಾಮನೂರು, ಬೇತೂರು, ಆನೆಕೊಂಡ, ಅಣಜಿ, ಕೊಡಗನೂರು, ಕುಂದವಾಡ ಮುಂತಾದ ನಗರದ ಸಮೀಪದ ಗ್ರಾಮಗಳಲ್ಲಿ ಶಾಸನಗಳು ದೊರೆತು, ವಿವಧ ಕಾಲಘಟ್ಟದಲ್ಲಿ ಆಳ್ವಿಕೆಮಾಡಿದ ಮನೆತನಗಳನ್ನೂ, ಭೂ ಭಾಗಗಳ ಸಂಪರ್ಕವನ್ನೂ ಸ್ಪಷ್ಟಪಡಿಸುತ್ತವೆ. ಈ ನಿಟ್ಟಿನಲ್ಲಿ ದಾವಣಗೆರೆ ಸುತ್ತಮುತ್ತಲಿನ ಗ್ರಾಮಗಳು ಘನಮನೆತನಗಳ ಆಳ್ವಿಕೆಗೊಳಪಟ್ಟಾಗ, ಅವುಗಳಿಂದ ಕೆಲವೇ ಮೈಲಿ ದೂರದ ದಾವಣಗೆರೆ ಗ್ರಾಮ ಆ ಮನೆತನಗಳ ಅಳ್ವಿಕೆಯ ಪ್ರದೇಶವಾಗಿತ್ತು ಎಂಬ ತೀರ್ಮಾನಕ್ಕೆ ಬರಬಹುದು. ಆದರೆ ದಾವಣಗೆರೆ ಅಂದು ಸಣ್ಣ ಗ್ರಾಮವಾಗಿತ್ತು ಎಂಬುದು ಗಮನಾರ್ಹ ವಿಷಯವಾಗಿದೆ.

ಕರ್ನಾಟಕದ ದಾವಣಗೆರೆ ಜಿಲ್ಲೆ ಕಾಲದಿಂದ ಕಾಲಕ್ಕೆ ಆಳಿದ ಅನೇಕ, ಸಾಮ್ರಾಜ್ಯಗಳ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿರಬಹುದು. ಇವರಲ್ಲಿ ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ನೊಳಂಬರು, ಸೇವುಣರು, ಹೊಯ್ಸಳರು, ನವಾಬರು, ಚಿತ್ರದುರ್ಗ

ನಾಯಕರು, ಉಚ್ಚಂಗಿ, ಪಾಂಡ್ಯರು, ವಿಜಯನಗರದ ಅರಸರು ಇನ್ನು ಸಣ್ಣ ಪುಟ್ಟ ಪಾಳೆಯಗಾರರ ಮನೆತನಗಳು ಪರೋಕ್ಷವಲ್ಲದಿದ್ದರೂ, ಅಪರೋಕ್ಷ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಕರೆಯುವುದಕ್ಕೆ ಸಾಕಷ್ಟು ಅಧಾರಗಳು ದೊರೆಯುತ್ತವೆ.

**ಮೌರ್ಯರು**

ಪ್ರಾಚೀನ ಭಾರತದ ಪ್ರಮುಖ ಆರಸು ಮನೆತನವಾದ ಮೌರ್ಯರು ಭಾರತದ ಬಹುಭಾಗವನ್ನು ಆಳಿದರು. ಭಾರತದಲ್ಲಿ ಆರಸು ಮನೆತನದ ಆಡಿಪಾಯ ಮತ್ತು ವ್ಯವಸ್ಥಿತ ಆಡಳಿತ ಪದ್ಧತಿ ಇವರಿಂದಲೆ ಪ್ರಾರಂಭವಾಗಿದೆ. ಇವರು ಉತ್ತರ ಭಾರತದ ಪಾಟಲೀಪುತ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಕ್ರಿ.ಪೂ.೪ನೆ ಶತಮಾನದ ಅಂತ್ಯಘಟ್ಟದಲ್ಲಿ ಅಧಿಕಾರಕ್ಕೇ ಬಂದರು. ಈ ಮನೆತನದ ಪ್ರಮುಖ ಅರಸ ಅಶೋಕನ ಕಾಲಕ್ಕೆ ದಕ್ಷಿಣ ಭಾರತವೂ ಇವರ ಸಾಮ್ರಾಜ್ಯದೊಳಗಿದ್ದ ಬಗ್ಗೆ ಅನೇಕ ಕುರುಹುಗಳು ದೊರೆಯುತ್ತದೆ. ಚಂದ್ರಗುಪ್ತ ಮೌರ್ಯ ದಕ್ಷಿಣಕ್ಕೆ ಬಂದದ್ದು ಹಾಗೂ ಅಶೋಕನ ಶಾಸನಗಳು ದಕ್ಷಿಣ ಭಾರತದ ಹಲವಾರು ಪ್ರದೇಶಗಳಲ್ಲಿ ಸಿಕ್ಕಿರುವುದು ಈ ನಿಟ್ಟಿನಲ್ಲಿ ಪ್ರಮುಖವಾಗಿದೆ.

ಅಶೋಕನ ಶಾಸನಗಳು ಕರ್ನಾಟಕದಲ್ಲಿ ಈವರೆಗೆ ಬೆಳಕಿಗೆ ಬಂದಿರುವುದು ಒಟ್ಟು ೧೪ ಶಾಸನಗಳಾಗಿವೆ. ಇವೆಲ್ಲವೂ ಲಘುಶಾಸನಗಳು ಇದರಿಂದ ಅಶೋಕನು ದಾವಣಗೆರೆ ಪರಿಸರದಲ್ಲಿ ಆಳ್ವಿಕೆ ಮಾಡಿರುವುದು ಸ್ಪಷ್ಟವಾಗುತ್ತದೆ. ಅದೆ ರೀತಿ ಅಶೋಕನ ಶಾಸನ ದೊರೆತ ಬ್ರಹ್ಮಗಿರಿ ಪ್ರದೇಶವು ಕಬ್ಬಿಣ ತಯಾರಿಕೆಯ ಕೇಂದ್ರವೆಂದು ಗುರುತಿಸಲಾಗಿದೆ. ರಾಜ್ಯದ ಗುಲ್ಬರ್ಗ, ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಅತೆಯೆ ಜಿಲ್ಲೆಯ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ, ಜಟಂಗಿರಾಮೇಶ್ವರಗಳಲ್ಲೂ ಮೌರ್ಯರ ಶಾಸನಗಳು ಅವರ ಆಳ್ಳಿಕೆಯನ್ನು ಸ್ಪಷ್ಟಪಡಿಸುತ್ತದೆ.[೧೫] ಮೌರ್‍ಯರ ಕಾಲಕ್ಕೆ ಸೇರಿರಬಹುದಾದ ಔತ್ತರೇಯ ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು, ಮುದ್ರಾಂಕಿತ ನಾಣ್ಯಗಳು ಇಲ್ಲಿ ದೊರೆತ್ತಿವೆ. ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು ಮೌರ್‍ಯರ ಕಾಲದ ಸಂಸ್ಕೃತಿಕ ಕುರುಹುಗಳಾಗಿವೆ. ದಾವಣಗೆರೆಗೆ ಕೆಲವೇ ದೂರದಲಿರುವ ಅಸಗೋಡು ಗ್ರಾಮವು ಅಶೋಕನ ಪಟ್ಟಣವಾಗಿದ್ದಿತೆಂಬ . ಇಂದು ದಾವಣಗೆರೆಯ ಒಂದು ಭಾಗವಾಗಿರುವ ಶ್ಯಾಮನೂರು ಬೌದ್ಧರ ಅವಲೋಕಿತೇಶ್ವರ ದೇವಾಲಯವನ್ನು ಗಮನಿಸಿದರೆ, ಭೌದ್ಧಮತಾವಲಂಬಿಗಳಾದ ಮೌರ್ಯರ ಆಳ್ಳಿಕೆಗೆ ದಾವಣಗೆರೆ ಒಳಪಟ್ಟಿದ್ದಿತೆಂದು ತಿಳಿದು ಬರುತ್ತದೆ.[೧೬]

**ಶಾತವಾಹನರು**

ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆ ಕ್ರಿ.ಪೂ. ೨೩೪ರ ವೇಳೆಗೆ ಮುಗಿಯಿತು. ಸು.ಕ್ರಿ.ಪೂ. ೧೮೭ರವರೆಗೆ ಮೌರ್ಯರ ಪ್ರಭುತ್ವವಿದ್ದರೂ, ಕೂಡಾ ಇವರ ಸಾಮ್ರಾಜ್ಯದಲ್ಲಿದ್ದ ಕರ್ನಾಟಕದ ಬಗ್ಗೆ ಮಾಹಿತಿ ತಿಳಿದುಬಂದಿರುವುದಿಲ್ಲ. ಇವರ ಆಳ್ವಿಕೆಯ ಕೊನೆಗಾಲದಲ್ಲಿ ಉತ್ತರದಲ್ಲಿ ಕುಶಾನರು, ದಕ್ಷಿಣದಲ್ಲಿ ಶಾತವಾಹನರು ಅಧಿಕಾರವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಕರ್ನಾಟಕದ ಉತ್ತರಭಾಗವು ಸೇರಿದಂತೆ ನರ್ಮದಾ ನದಿಯವರೆಗಿನ ರಾಜ್ಯವನ್ನು ಕಟ್ಟಿದರು. ಕರ್ನಾಟಕದ ಕೇಲವು ಭಾಗಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು.[೧೭] ಕದಂಬರಿಗಿಂತಲೂ ಮೊದಲು ಮೌರ್ಯರ, ನಂತರ ಶಾತವಾಹನರು ದಕ್ಷಿಣಾಪಥದ ಒಡೆಯರಾದಾಗ, ತಾವು ಕುಂತಳಸ್ವಾಮಿಗಳೆಂದು ಹೇಳಿಕೊಂಡಿದ್ದಾರೆ. ಭೀಮಾ ಮತ್ತು ವೇದಾವತಿ ನದಿಗಳ ಮಧ್ಯಪ್ರದೇಶವೇ ಕುಂತಳದೇಶವಾಗಿದ್ದುದರಿಂದ, ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ಸಹ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದು.

ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳು ಶಾತವಾಹನರ ಕಾಲದಲ್ಲಿಯೂ ಪ್ರಮುಖ ಕೇದ್ರಗಳಾಗಿ ಮುಂದುವರಿದಂತೆ ತೋರುತ್ತದೆ. ಇಲ್ಲಿನ ಉತ್ಖನನಗಳಲ್ಲಿ ಶಾತವಾಹನರ ಕಾಲಕ್ಕೆ ಸೇರಿಸಬಹುದಾದ ಹಲವಾರು ಅವಶೇಷಗಳನ್ನು ಗುರುತಿಸಲಾಗಿದೆ. ಇಲ್ಲಿನ ಇಟ್ಟಿಗೆ ಕಟ್ಟಡಗಳು ಮೌರ್ಯರ ನಂತರದಲ್ಲಿ ಶಾತವಾಹನರಿಂದಲೇ ರಚಿಸಲ್ಪಟ್ಟಿರಬಹುದೆಂದು ತಿಳಿಯಲಾಗಿದೆ. ಚಂದ್ರವಳ್ಳಿಯಲ್ಲಿ ಶಾತವಾಹನರ ಪ್ರಮುಖ ದೊರೆ ಯಜ್ಞಶ್ರೀ ಶಾತಕರ್ಣಿಯ ಹೆಸರುಳ್ಳ ನಾಣ್ಯ ದೊರೆತಿದೆ. ಶಾತವಾಹನರು ಸಾಮಾನ್ಯವಾಗಿ ಹೊಳಪುಳ್ಳ ಕಪ್ಪು, ಕೆಂಪು ವರ್ಣದ ಮಡಿಕೆಗಳು ಇವರ ಕಾಲದವೆಂದು ಇತಿಹಾಸಕಾರರು ಗುರುತಿಸಿದ್ದಾರೆ.[೧೮] ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ ಇವುಗಳಿಗೆ ಹೊಂದಿಕೊಂಡಿರು ದಾವಣಗೆರ ಜಿಲ್ಲೆಯ ಜಗಳೂರು ತಾ. ಆಕನೂರು ಹಾಗೂ ಹೊನ್ನಾಳಿ ತಾ. ಬೆಳಗುತ್ತಿಯಲ್ಲಿ ಇವರ ಕಾಲಕ್ಕೆ ಸೇರಿದ ಮಡಿಕೆ ಚೂರುಗಳು ದೊರೆತಿವೆ. ಹಾಗಾಗಿ ಈ ಪರಿಸರ ಇವರ ಆಳ್ವಿಕೆಗೆ ಒಳಪಟ್ಟಿರಬಹುದು.

**ಕದಂಬರು**

ವೈಜಯಂತಿಪುರ ಅಥವಾ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರಕ್ಕೆ ಬಂದವರು ಕದಂಬರು. ಕನ್ನಡ ನಾಡಿನ ಪ್ರಥಮ ಚಕ್ರವರ್ತಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಕದಂಬರಾಜ್ಯ ಸ್ಥಾಪಕನಾದ ಮಯೂರಶರ್ಮನ ಏಕೈಕ ಶಾಸನ ದೊರೆತಿರುವುದು ಚಂದ್ರವಳ್ಳಿಯಲ್ಲಿ, ಈ ಶಾಸನವನ್ನು ಕುರಿತು ಅಧ್ಯಯನ ನಡೆಸಿದ ಡಾ. ಎಂ.ಹೆಚ್. ಕೃಷ್ಣರವರು, ಶಾಸನದ ಭಾಷೆ ಪ್ರಾಕೃತ ಎಂದು ಇದರ ಕಾಲಮಾನ ಕ್ರಿ.ಶ.೨೫೮ ಎಂದು ನಿರ್ಧರಿಸಿದರು. ಮೂರು ಸಾಲುಗಳಲ್ಲಿರುವ ಈ ಶಾಸನವು ಈ ಪ್ರದೇಶದಲ್ಲಿ ಒಂದು ಕೆರೆಯನ್ನು ನಿರ್ಮಿಸಿದ್ದು ಹಾಗೂ ಅನೇಕ

ದಿಗ್ವಿಜಯಗಳನ್ನು ತಿಳಿಸುತ್ತದೆ. ಸ್ಥಳೀಯ ಸಂಶೋಧಕರಾದ ಡಾ. ಬಿ. ರಾಜಶೇಖರಪ್ಪನವರು ಪುನರ್ ಅಧ್ಯಯನ ನಡೆಸಿ ಹಲವಾರು ಹೊಸ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಕ್ರಿ.ಶ. ೪ನೇ ಶತಮಾನದಲ್ಲಿ ಮಯೂರವರ್ಮನಿಂದ ಪ್ರಾರಂಭವಾದ ಈ ವಂಶದಲ್ಲಿ ಕಂಗವರ್ಮ, ಭಗಿರಥವರ್ಮ, ರಘುವರ್ಮ, ಕಾಕುತ್ಸವರ್ಮ, ಶಾಂತಿವರ್ಮ, ಕೃಷ್ಣವರ್ಮ ಮೊದಲಾದ ದೊರೆಗಳು ಆಗಿ ಹೋದರು. ಕದಂಬರ ಕಾಲದಲ್ಲಿ ದಾವಣಗೆರೆ ಪ್ರದೇಶ ಅವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಶಾಸನಗಳಿಂದ ತಿಳಿಯುತ್ತದೆ. ಇದೇ ದಾವಣಗೆರೆ ತಾಲೂಕಿನ ಕಾಶಿಪುರ ಎಂಬ ಗ್ರಾಮದಲ್ಲಿ ಮೂರು ಹಲಗೆಯುಳ್ಳ, ಸಿಂಹ ಲಾಂಛನವುಳ್ಳ ರವಿ ಮಹಾರಾಜನ ತಾಮ್ರ ಶಾಸನ ದೊರೆತ್ತಿದೆ.[೧೯] ಹತ್ತಿರದ ಅಣಜಿಯಲ್ಲಿ ದೊರೆತ ಶಿವನಂದವರ್ಮನ ಹಾಗೂ ಕಾಶಿಪುರದ ರವಿವರ್ಮನ ಶಾಸನಗಳಿಂದ ಕ್ರಿ.ಶ. ೩-೬ನೇ ಶತಮಾನದವರೆಗೆ ದಾವಣಗೆರೆ ಬನಾವಸಿಯ ಕದಂಬರ ಆಳ್ವಿಕೆಗೆ ಒಳಪಟ್ಟು, ಸಮೀಪದಲ್ಲಿರುವ ಉಚ್ಚಂಗಿದುರ್ಗವು ಅವರ ಮುಖ್ಯ ಪಟ್ಟಣವಾಗಿದ್ದಿತೆಂದು ತಿಳಿದುಬರುತ್ತದೆ. ಪ್ರಸುತ್ತ ಪ್ರದೇಶದಲ್ಲಿ ಕದಂಬರಿಗೆ ಸಂಬಂಧಿಸಿದ ಶಾಸನಗಳು ವಿರಳವಾದರೂ ಅವರ ಕಾಲದ ಕೆಲವು ಪ್ರಮುಖ ಸಂಗತಿಗಳನ್ನು ಇಲ್ಲಿನ ಶಾಸನಗಳಿಂದ ತಿಳಿಯಬಹುದಾಗಿದೆ.

### ಬದಾಮಿ ಚಾಲುಕ್ಯರು

೬ನೇ ಶತಮಾನದ ಆದಿಭಾಗದಿಂದ ಕ್ರಿ.ಶ. ೭೫೭ರವರೆಗೆ’ ಅಳ್ವಿಕೆ ನಡೆಸಿದ ಚಾಲುಕ್ಯರು ಕರ್ನಾಟಕದ ಇತಿಹಾಸಕ್ಕೆ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ತರವಾದ ಕಾಣಿಕೆಗಳನ್ನು ನೀಡಿದ್ದಾರೆ. ಪಲ್ಲವರಿಗೂ ಮತ್ತು ಬದಾಮಿ ಚಾಲುಕ್ಯರಿಗೂ ಗಡಿಭಾಗದಲ್ಲಿದ್ದ ಈ ಪ್ರದೇಶವು ಅವರಿಬ್ಬರ ಕಾಳಗದ ಭೂಪ್ರದೇಶವಾಗಿತ್ತು. ಈ ಕಾಲಘಟ್ಟದ ರಾಜಕೀಯ ಪರಿಸ್ಥಿತಿಯಲ್ಲಿ ಹೆಂಜೇನುವಿನ ನೊಳಂಬರು, ಉಚ್ಚಂಗಿಯ ಪಾಂಡ್ಯರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಈ ಕಾಲದ ಕೆಲವು ಶಾಸನಗಳಲ್ಲಿ ಕದಂಬಳಿಗೆ, ನೊಳಂಬಳಿಗೆ ಎಂದೂ ಸಹ ಈ ಪ್ರದೇಶವನ್ನು ಹೆಸರಿಸಲಾಗಿದೆ. ಇಮ್ಮಡಿ ಪುಲಕೇಶಿಯ ಕಾಲಕ್ಕೆ ಈ ಭಾಗವು ಆತನ ನೇರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ. ದಾವಣಗೆರೆ ತಾಲೂಕಿನ ನಲ್ಕುಂದ ಗ್ರಾಮದಲ್ಲಿ ದೊರೆತಿರುವ ತಾಮ್ರ ಶಾಸನ ಅವನ ನಂತರದ ಕಾಲದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಅಭಿನವಾದಿತ್ಯನ ಶಾಸನವೆಂದೇ ಪ್ರಸಿದ್ಧವಾದ ಇದರಲ್ಲಿ ನಲ್ಕುಂದ ಗ್ರಾಮವನ್ನು ನಲ್ಲಿಕುಡಿ ಎಂದು ಹೆಸರಿಸಲಾಗಿದೆ. ಉಚ್ಚಂಗಿ ಪರಿಸರದ ಈ ಶಾಸನವು ದಾನ ಶಾಸನವಾಗಿದೆ. ಇಲ್ಲಿನ ಕುಪ್ಪಶರ್ಮ ಎಂಬ ಬ್ರಾಹ್ಮಣನಿಗೆ ದಾನ ನೀಡಿದ ವಿವರಗಳನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅಭಿನವಾದಿತ್ಯನು ತನ್ನನ್ನು ಸತ್ಯಾಶ್ರಯ ಮತ್ತು ಪರಮೇಶ್ವರ ಎಂಬುದಾಗಿ, ಪೃಥ್ವೀವಲ್ಲಭ ಮಹಾರಾಜಾಧಿರಾಜ ಎಂದೂ ಸಹ ಕರೆದುಕೊಂಡಿದ್ದಾನೆ. ಇದರಿಂದಾಗಿ ಈತನು ಪುಲಕೇಶಿಯ ನಂತರ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದಂತೆ ಕಂಡುಬರುತ್ತದೆ.

## ರಾಷ್ಟ್ರಕೂಟರು

ರಾಷ್ಟ್ರಕೂಟರು ದಕ್ಷಿಣ ಭಾರತದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರು ಎರಡು ಶತಮಾನಕ್ಕೂ ಹೆಚ್ಚು ಕಾಲ ಕರ್ನಾಟಕದ ಸಾರ್ವಭೌಮರಾಗಿ ಆಡಳಿತ ನಡೆಸಿದರೆಂದು ಆಕರಗಳಿಂದ ತಿಳಿಯುತ್ತದೆ. ಚಾಲುಕ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು ಸಹ ಬಲಿಷ್ಠ ರಾಜಮನೆತನಗಳಲ್ಲಿ ಒಂದಾಗಿದ್ದಾರೆ. ಇವರು ಗುಲ್ಬರ್ಗ ಜಿಲ್ಲೆಯ ಮಳಖೇಡದಿಂದ ಆಳ್ವಿಕೆ ನಡೆಸಿದ ಇವರು ಮಾನ್ಯಕೇಟದ ರಾಷ್ಟ್ರಕೂಟರೆಂದೇ ಪ್ರಸಿದ್ಧರಾಗಿದ್ದಾರೆ. ಇವರು ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಕರ್ನಾಟಕವನ್ನು ದಕ್ಷಿಣದ ಕಾವೇರಿ ನದಿಯಿಂದ ಉತ್ತರದ ಗೋದಾವರಿ ನದಿಯವರೆಗೂ ವಿಶಾಲ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆಯನ್ನು ಮಾಡಿದರೆಂದು ಕವಿರಾಜಮಾರ್ಗ ಕೃತಿಯಲ್ಲಿ ಉಲ್ಲೇಖವಾಗಿದೆ. ಇಸಾಮುದ್ರದಲ್ಲಿ ದೊರೆತಿರುವ ಶಾಸನವು ಕ್ರಿ.ಶ. ೯೩೭ರಲ್ಲಿ ರಚನೆಗೊಂಡಿದ್ದು, ರಾಷ್ಟ್ರಕೂಟರ ವಂಶಾವಳಿಯನ್ನು ನೀಡುತ್ತದೆ. ಕ್ರಿ.ಶ. ೧೯೪೨ರ ದಾವಣಗೆರೆ ತಾಲೂಕಿನ ಹದಡಿಗ್ರಾಮದ ಈಶ್ವರ ದೇವಾಲಯದಲ್ಲಿರುವ ಶಾಸನ[೨೦] ಮತ್ತು ಕ್ರಿ.ಶ. ೧೦೯೦ ಇಸಾಮುದ್ರ ಶಾಸನಗಳು ತ್ರೈಲೋಕ್ಯಹವಮಲ್ಲನ ಹೆಸರನ್ನು ಉಲೇಕಿಸುತ್ತದೆ.

ಕ್ರಿ.ಶ. ೯೬೮ರ ಕ್ಯಾಸಪುರ ಶಾಸನವು ಕದಂಬಾಳಿಗೆ ಸಾವಿರ ನಾಡನ್ನು ಈತನ ಕಾಲಾವಧಿಯಲ್ಲಿ ಪಂದಯ್ಯನು ಆಳುತ್ತಿದ್ದನು ಎನ್ನುವ ಉಲ್ಲೇಖ ನೀಡುತ್ತದೆ. ದಾವಣಗೆರೆ ತಾಲೂಕಿನ ಕೊಡಗನೂರು ಶಾಸನವು ಎರಡನೇ ಕರ್ಕನ (೯೭೨-೯೭೭) ಆಳ್ವಿಕೆಗೆ ಸಂಬಂದಿಸಿದೆ. ಇದರಲ್ಲಿ ಸಹ ಪನ್ದಯ್ಯನ ಉಲ್ಲೇಖವಿದೆ. ೬-೮ನೇ ಶತಮಾನದ ನಂತರ ರಾಷ್ಟ್ರಕೂಟರಿಗೆ ಈ ಪ್ರದೇಶ ಸೇರಿದ್ದು ತಿಳಿಯಬಹುದಾಗಿದೆ. ಹಾಗೂ ಇವರು ೧೦ನೇ ಶತಮಾನದವರೆಗೆ ಆಳಿದ್ದಾರೆ. ಇವರ ಕಾಲದಲ್ಲಿ ನಾಡನ್ನು ಹಲವು ಗ್ರಾಮಗಳ ಘಟಕಗಳನ್ನಾಗಿಸಿ ಆಳುತ್ತಿದ್ದರು. (ಕದಂಬಳಿಗೆ-೧೦೦೦ ಮಂಡಳಿ-೧೦೦೦,,ಹೀಗೆ) ದಾವಣಗೆರೆಯ ಹತ್ತಿರದ ಕಾಡಜ್ಜಿ ಗ್ರಾಮಶಾಸನದಿಂದ ಎಲ್ಲ ವೃತ್ತಿಗಳಂತೆ ವೇಶ್ಯಾವೃತ್ತಿಯೂ ಮಾನ್ಯತೆ ಪಡೆದಿತ್ತು. ಶ್ರೀ ಕನ್ನರದೇವರಾಜ್ಯ ಮುತ್ತುರೋತ್ತರಂ ಸಲ್ಲುತಿರೆ, ಮಯ್ದುವರಸೆಂ ಸೂಳೆ ಕಾಡಜ್ಜಿ ಕಾಡಜ್ಜಿಯ ಮಗಳು ಕಳಿಂಗಜ್ಜಿ ಇತ್ಯಾದಿ ಗುರುತಿಸಬಹುದಾಗಿದೆ.

## ಕಲ್ಯಾಣ ಚಾಲುಕ್ಯರು

ಚಾಲುಕ್ಯರು ಸು.ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣಭಾರತದ ಇತಿಹಾಸದಲ್ಲಿ ಅದರಲ್ಲೂ ವಿಶೇಷವಾಗಿ ಕರ್ನಾಟಕ ಇತಿಹಾಸದಲ್ಲಿ ಮಹತ್ತದ ಪಾತ್ರವಹಿಸಿದ್ದಾರೆ. ಆರನೆ ವಿಕ್ರಮಾದಿತ್ಯನ ಕಾಲದಲ್ಲಿ ಇವನ ಮೆಚ್ಚಿನ ಸಾಮಂತ ತ್ರಿಭುವನ ಮಲ್ಲ ಪಾಂಡ್ಯನು ಕ್ರಿ.ಶ. ೧೦೮೩ರಲ್ಲಿ, ಈ ನೊಳಂಬವಾಡಿಯ ಮಹಾಮಂಡಲೇಶ್ವರನಾಗಿ, ದಾವಣಗೆರೆಗೆ ವಾಯುವ್ಯದಲ್ಲಿರುವ ಬೇತೂರನ್ನು ತನ್ನ ಆಡಳಿತ ಕೇದ್ರವನ್ನಾಗಿಸಿಕೊಂಡು ಆಳಿದ್ದರಿಂದ ಈ ಪ್ರದೇಶವನ್ನು

'ಪಾಂಡ್ಯಮಂಡಲ'ವೆಂದು ಕರೆಯಲಾಗಿತ್ತು. ಆಗ ದಾವಣಗೆರೆ ಪಾಂಡ್ಯಮಂಡಲದಲ್ಲಿ ಅಂತರ್ಗತವಾಗಿತ್ತು. ತ್ರೈಲೋಕ್ಯ ಮಲ್ಲನ ರಾಣಿ ಹೊಯ್ಸಳದೇವಿಯು ತುಂಗಭದ್ರ ತೀರದ 'ಹೊನ್ನಾಳಿ' ಯ ಗೌಡನಿಗೆ ತೀರ್ಥಕ್ಷೇತ್ರ ಏರ್ಪಡಿಸುವಂತೆ ಸೂಚಿಸಿ ದಾನ ನೀಡುತ್ತಾಳೆ.[೨೧] ದಾವಣಗೆರೆ ಹತ್ತಿರದ ಅವರಗೆರೆ ಗ್ರಾಮದ ಕ್ರಿ.ಶ. ೧೦೪೨ರ ಕಾಲದ ಶಾಸನದಿಂದ ಇಮ್ಮಡಿ ನೊಳಂಬಪಲ್ಲವನು ಚಾಲುಕ್ಯರ ಜಗದೇಕಮಲ್ಲದೇವನ ಸಾಮಂತನಾಗಿ ಉದಯಾದಿತ್ಯ ನೊಳಂಬಪಲ್ಲವ ಪೆರ್ಮಾಡಿಯು, ಚಾಲುಕ್ಯರ ಜಯಸಿಂಹನ ಸಾಮತಂನಾಗಿದ್ದನೆಂದು ಮುದಹದಡಿ ಈಶ್ವರ ದೇವಾಲಯದ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೦೭೩. ಇದರಿಂದ ನೊಳಂಬಪಲ್ಲವರ ಆಳ್ವಿಕೆಗೆ ಒಳಗಾಗಿರಲು ಸಾಧ್ಯವಾಗಿದೆ. (ದಾವಣಗೆರೆ ಶಾಸನಗಳಿಂದ ೧೯, ೭೧, ೮೫, ೧೨೪, ೧೨೬, ೧೬೮ ) ಚಾಲುಕ್ಯ ಜಯಸಿಂಹ, ವಿಕ್ರಮಾದಿತ್ಯ, ಜಗದೇಕಮಲ್ಲ, ಜಯಪಾಂಡ್ಯ ಮುಂತಾದವರ ವಿಚಾರಗಳನ್ನು ಕಾಣಬಹುದು. ನನ್ನಿನೊಳಂಬಪಲ್ಲವಪೆರ್ಮಾಡಿ ದೇವನು ಈ ತ್ರೈಲೋಕ್ಯಮಲ್ಲನ ಕೆಲವು ಪ್ರಾಂತ್ಯಗಳ ರಾಜ್ಯಪಾಲನಾಗಿದ್ದನೆಂದು ಕ್ರಿ.ಶ. ೧೦೪೮ ಮತ್ತು ೧೦೫೪ರ ಎರಡು ಶಾಸನದಿಂದ ತಿಳಿದುಬರುತ್ತದೆ.[೨೨] ಚಾಲುಕ್ಯರ ಜಯಸಿಂಹನ ಮಗ ಸೋಮೇಶ್ವರ ಅಥವಾ ತೈಲೋಕ್ಯಮಲ್ಲನು ದಾವಣಗೆರೆ ಹತ್ತಿರದ ಹದಡಿಗ್ರಾಮ ಶಾಸನದಿಂದ ಕದಂಬಳಿಗೆ ೧೦೦೦ವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ದಾವಣಗೆರೆ ತಾಲ್ಲಕಿನ ಆನೇಕ ಚಾಲುಕ್ಯ ಶೈಲಿಯ ದೇವಾಲಯಗಳನ್ನು ಗಮನಿಸಬಹುದು. ಇದೇ ಕಾಲದಲ್ಲಿ ಚಾಲುಕ್ಯರಿಗೆ ಸಾಮಂತರಾಗಿ ನೊಳಂಬರು (ಕ್ರಿ.ಶ.೭೦೦-೧೦೫೦), ಉಚ್ಚಂಗಿಯ ಪಾಂಡ್ಯರು (೧೦೭೩-೧೧೮೩) ಕೆಲವು ಪ್ರಾಂತ್ಯಗಳನ್ನು ಆಳುತ್ತಿದ್ದುದರಿಂದ ಚಾಲುಕ್ಯರ ಕಾಲದಲ್ಲಿ ದಾವಣಗೆರೆ ಪ್ರದೇಶ ನೊಳಂಬವಾಡಿಯ ೩೨೦೦೦ ಪ್ರಾಂತ್ಯದ ಒಂದು ಭಾಗವಾಗಿತ್ತು.

**ನೊಳಂಬರು**

ಕರ್ನಾಟಕ ಇತಿಹಾಸದಲ್ಲಿ ಅನೇಕ ರಾಜಮನೆತನಗಳ ಅಧೀನದಲ್ಲಿ ಸಾಮಂತರು ಮತ್ತು ಮಹಾಮಂಡಲೇಶ್ವರರು ಆಡಳಿತವನ್ನು ಮಾಡಿ ನಂತರದಲ್ಲಿ ಸಾಂಸ್ಕೃತಿಕವಾಗಿ ನೊಳಂಬರು ಪ್ರಸಿದ್ಧಿ ಪಡೆದಿದ್ದಾರೆ. ಗಂಗರು, ಚಾಲುಕ್ಯರು, ಚೋಳ ಮತ್ತು ಹೊಯ್ಸಳರ ಮಹಾ ಸಾಮಂತರಾಗಿ ಆಳಿದ ನೊಳಂಬರು ಸಾಮಂತ ಕುಲದವರಾಗಿದ್ದು, ನೊಳಂಬರ ಮೊದಲ ರಾಜ ಕಂಚಿ ಪಲ್ಲವ ರಾಜ ತ್ರಿಣಯನು ಎಂದು ಐತಿಹ್ಯವಿದೆ. ಇವರು ಆಳುತ್ತಿದ್ದ ಒಟ್ಟು ಪ್ರದೇಶವನ್ನು ನೊಳಂಬವಾಡಿ ೩೨೦೦೦ ನಾಡು ಎಂದು ಕರೆಯುತ್ತಿದ್ದರು. ನೊಳಂಬರು ತಾವು ಪಲ್ಲವರೆಂದು ಹೇಳಿಕೊಂಡಿದ್ದಾರೆ. ಆದರೆ ನೊಳಂಬರಿಗೂ, ಪಲ್ಲವರಿಗೂ ಇದ್ದ ನಿರ್ದಿಷ್ಟ ಸಂಬಂಧವೇನೆಂಬುದು ಖಚಿತವಾಗಿ ತಿಳಿದುಬಂದಿಲ್ಲ. ಇವರ ನಂತರ ದಾವಣಗೆರೆ ನೊಳಂಬರಿಗೆ ಸೇರಿತ್ತು.

ದಾವಣಗೆರೆಯ ಸಮೀಪ ಅಣಜಿ ಗ್ರಾಮವಿದೆ. ಅಣಜಿಯ ಪ್ರಾಚೀನ ಶಿಲಾಶಾಸನದ ಕಾಲ ಕ್ರಿ.ಶ.೪೫೦. ಈ ಶಾಸನದಿಂದ ನೊಳಂಬಪಲ್ಲವರ ಆಳ್ವಿಕೆಯನ್ನು ತಿಳಿಯಬಹುದು. ಇವರು ಪಲ್ಲವರ ವಂಶೀಕರೆಂದು ಹೇಳಿಕೊಳ್ಳುತ್ತಿದ್ದರು. ಇವರ ನಂತರ ಸೇವುಣರ ಆಳ್ವಿಕೆ ಪ್ರಾರಂಭವಾಯಿತು. ದಾವಣಗೆರೆ ತಾಲೂಕಿನಲ್ಲಿ ಕ್ರಿ.ಶ. ೧೦೪೨ರ ಹದಡಿ ಈಶ್ವರ ದೇವಾಲಯದ ಮತ್ತು ಕ್ರಿ.ಶ. ೧೦೪೫ರ ವಡ್ಡನಹಳ್ಳಿಯ ಶಾಸನಗಳು ತ್ರೈಲೋಕ್ಯಮಲ್ಲ ನನ್ನಿ ನೊಳಂಬಪಲ್ಲವನು ಹಲವು ಪ್ರಾಂತ್ಯಗಳನ್ನು ವೈಭವದಿಂದ ಆಳುತ್ತಿದ್ದನೆಂದು ಉಲೇಖಿಸುತ್ತವೆ. ಜಗಳೂರು ತಾಲೂಕಿನ ಮುಷ್ಟೂರಿನ ಕಲ್ಲೇಶ್ವರ ದೇವಾಲಯದ ಕ್ರಿ.ಶ. ೯೨೦ರ ಶಾಸನವು ನೊಳಂವಾಧಿರಾಜ ಅಯ್ಯಪ್ಪದೇವ ನೊಳಂಬವಾಡಿ ಮತ್ತಿತರ ನಾಡುಗಳನ್ನು ಆಳುತ್ತಿದ್ದನೆಂದಿದೆ. ಎರಡನೆಯ ಶಾಸನವು ಜವಯ್ಯನ ಮಗ ನಾಥವರ್ಮನು ಮುಷ್ಟೂರಿನ ಕಲ್ಲೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನೆಂದಿದೆ. ಚನ್ನಗಿರಿ ಮತ್ತು ಹೊನ್ನಾಳಿ ಭಾಗದಲ್ಲಿ ಕ್ರಿ.ಶ. ೧೦೪೮ ರಿಂದ ೧೦೫೪ರ ವರೆಗಿನ ಆಳ್ವಿಕೆಯನ್ನು ನೊಳಂಬರು ನಡೆಸಿದರೆಂದು ಇಲ್ಲಿನ ಶಾಸನದಿಂದ ತಿಳಿಯುತ್ತದೆ. ನೊಳಂಬವಾಡಿ ೩೨೦೦೦ರಲ್ಲಿ ಉಚ್ಚಂಗಿದುರ್ಗ ಒಂದು ಮುಖ್ಯ ಪಟ್ಟಣವಾಗಿತ್ತು.[೨೩]

**ಹೊಯ್ಸಳರು**

೧೧ನೇ ಶತಮಾನದವರೆಗೆ ಇಡೀ ದಕ್ಷಿಣ ಭಾರತವನ್ನೇ ಆಳಿದ ಹೊಯ್ಸಳರು ನೊಳಂಬವಾಡಿ (ದಾವಣಗೆರೆ ಜಿಲ್ಲೆ) ಯ ಮೇಲೆ ಆಳ್ವಿಕೆಯನ್ನು ಮಾಡಿದ್ದಾರೆ. ಇವರು ಉಚ್ಚಂಗಿ ಪಾಂಡ್ಯರ ಮೇಲೆ ಯುದ್ಧಮಾಡಿ ವಿಜಯ ಸಾಧಿಸಿ ರಾಜ್ಯವನ್ನು ವಿಸ್ತಾರಿಸಿದರು. ಆದರಿಂದ ಇಡೀ ದಾವಣಗೆರೆ ಜಿಲ್ಲೆಯನ್ನು ಹೊಯ್ಸಳರು ಆಳಿದರು ಎಂದು ಹೇಳಲು ಸುಮಾರು ೫೦ಕ್ಕೂ ಹೆಚ್ಚು ಶಾಸನಗಳು ದೊರೆತಿವೆ. ದಾವಣಗೆರೆ ಪ್ರದೇಶವು ಇವರ ಆಳ್ವಿಕೆಯಲ್ಲಿ ಸಾಂಸ್ಕೃತಿಕವಾಗಿ ಬೆಳೆಯಿತೆನ್ನಲು ದಾವಣಗೆರೆ ತಾಲೂಕಿನಲ್ಲಿ ಇವರು ಕಟ್ಟಿಸಿರುವ ದೇವಾಲಯಗಳೇ ಸಾಕ್ಷಿಯಾಗಿವೆ. ಆನೆಕೊಂಡದ ಈಶ್ವರದೇವಾಲಯ, ಲೋಕಿಕೆರೆ ಕೊಗ್ಗನೂರಿನ ಈಶ್ವರ ದೇವಾಲಯ ಮುಂತಾದವುಗಳು, ಹೊಯ್ಸಳರು ಚಾಲುಕ್ಯರ ಸಾಮಂತರಾಗಿದ್ದಾಗಲೇ ನೊಳಂಬವಾಡಿಯು ಅಂದರೆ ಚಿತ್ರದುರ್ಗ–ದಾವಣಗೆರೆ ಪ್ರದೇಶಗಳು ಗಮನ ಸೆಳೆದಿದ್ದವು. ಕ್ರಿ.ಶ. ೧೦೬೩ರಿಂದ ಆಳಿದ ಎರೆಯಂಗನು ಪಾಂಡ್ಯರಾಜ ಇರುಕ್ಕವೇಲನ ಮಗಳನ್ನು ಮದುವೆಯಾಗಿದ್ದನು. ಅನಮತರ ಅವನ ಮಗ ಒಂದನೆಯ ಬಲ್ಲಾಳನು ತನ್ನ ಸಹೋದರ ಬಿಟ್ಟಿದೇವನೊಡನೆ ಉಚ್ಚಂಗಿ ಪಾಂಡ್ಯರ ಮೇಲೆ ಯುದ್ಧಮಾಡಿ ಅವರ ಸಮಸ್ತ ಸಂಪತ್ತನ್ನು ಸೂರೆ ಮಾಡಿದನಂತೆ. ಮುಂದೆ ವಿಷ್ಣುವರ್ಧನನೆಂದು ಪ್ರಸಿದ್ಧನಾದ ಬಿಟ್ಟಿದೇವನು ಈ ಜಿಲ್ಲೆಯ ಅನೇಕ ಭಾಗಗಳನ್ನು ಗೆದ್ದುಕೊಂಡನು. ದುಮ್ಮಿಯ ಬಳಿ ನಡೆದ ಯುದ್ಧದಲ್ಲಿ ಉಚ್ಚಂಗಿ ಪಾಂಡ್ಯರನ್ನು ಸೋಲಿಸಿ 'ನೊಳಂಬವಾಡಿಗೊಂಡ' ಎಂಬ ಬಿರುದಿಗೆ ಪಾತ್ರನಾದನು. ಹೊಯ್ಸಳರ ವೀರಬಲ್ಲಾಳನ ರಾಣಿಯಾದ ಅಭಿನವ ಕೇತಲದೇವಿ ಕ್ರಿ.ಶ. ೧೨೧೮ರಲ್ಲಿ

ಕುಂದುವಾಡದಲ್ಲಿ ಬುಧವಾರ ಸಂತೆ ನಡೆಸಿ, ಅದರಿಂದ ಬಂದ ಆದಾಯವನ್ನು ಸೋಮನಾಥ ದೇವರಿಗೆ ದಾನ ಬಿಟ್ಟಳೆಂದು ದಾವಣಗೆರೆಯ ೧೧೫ನೇ ಶಾಸನದಿಂದ ತಿಳಿದುಬರುತ್ತದೆ. ಇದರಿಂದ ಈ ಪ್ರದೇಶವು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದನ್ನು ಸ್ಪಷ್ಟಪಡಿಸಬಹುದು.[೨೪]

**ಉಚ್ಚಂಗಿ ಪಾಂಡ್ಯರು**

೧೧-೧೨ನೆಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಸಣ್ಣ ಪುಟ್ಟ ನಾಡುಗಳನ್ನು ಆಳುತ್ತಿದ್ದ ೧೨ ಸಾಮಂತ ಮನೆತನಗಳಲ್ಲಿ ಒಂದಾಗಿದೆ. ಇವರು ತಾವು ಯದುವಂಶದವರೆಂದು ಹೇಳಿಕೊಂಡಿದ್ದಾರೆ.[೨೫] ದಾವಣಗೆರೆ ಜಿಲ್ಲೆಯ ಮತ್ತು ಸುತ್ತಮುತ್ತಲ್ಲಿನ ಪ್ರದೇಶಗಳಲ್ಲಿ ನೊಳಂಬವಾಡಿ ೩೨೦೦೦ ನೊಳಂಬ, ಪಲ್ಲವರ ಅನಂತರ ಪಾಂಡ್ಯರು ಉಚ್ಚಂಗಿದುರ್ಗ ಪರಿಸರದಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದರು. ಈ ಮನೆತನದ ಕೆಲವು ಅರಸರ ಹೆಸರುಗಳು ತಮಿಳು ಪಾಂಡ್ಯರ ರಾಜ್ಯ ಸ್ಥಾಪಕ ಆದಿತ್ಯದೇವ ಅಥವಾ ಮಂಗಯ್ಯ. ಇವರ ರಾಜಧಾನಿ ಉಚ್ಚಂಗಿದುರ್ಗ ಆಗಿದೆ. ಪಾಡ್ಯರ ದೊರೆ ರಾಯಪಾಂಡ್ಯ ದಾವಣಗೆರೆ ಕಸಬಾ ಪರಿಸರದ ಎಲೇಬೇತೂರಿನಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದನು. ಇವರ ಶಾಸನಗಳಲ್ಲಿ ಉದಯ, ಪಂಡಿತಪಾಂಡ್ಯ, ಕುಮಾರ ವಿಜಯಪಾಂಡ್ಯ, ತೈಲಪ, ಜಗದ್ದಳ ಎಂಬ ಪಾಂಡ್ಯರ ಹೆಸರುಗಳು ಕಂಡುಬರುತ್ತವೆ.

**ಸೇವುಣರು**

ದಾವಣಗೆರೆ ಇವರ ಆಳ್ವಿಕೆಗೆ ಒಳಪಟ್ಟಿತು ಎಂದು ಸಮರ್ಥಿಸಲು ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು ೨೬ ಶಾಸನಗಳಲ್ಲಿ ೧೮ ಕ್ಕೂ ಹೆಚ್ಚು ಶಾಸನಗಳು ದಾವಣಗೆರೆ ತಾಲೂಕಿನಲ್ಲಿಯೇ ದೊರೆತಿವೆ. ದೇವಗಿರಿಯಿಂದ ಆಳ್ವಿದ್ದರಿಂದ ದೇವಗಿರಿಯ ಸೇವುಣರು ಅಥವಾ ದೇವಗಿರಿಯ ಯಾದವರು ಎಂದೇ ಪ್ರಖ್ಯಾತರಾಗಿದ್ದರು. ದಾವಣಗೆರೆ ತಾಲೂಕಿಗೆ ಹತ್ತಿರದ ಹೆಮ್ಮನಬೇತೂರು, ಅಣಜಿ ಮುಂತಾದ ಗ್ರಾಮಗಳ ಶಾಸನದಿಂದ ಇವರ ಬಗ್ಗೆ ತಿಳಿದುಬರುತ್ತದೆ. ದಾವಣಗೆರೆಯಿಂದ ೩ ಮೈಲಿದೂರದ ಅವರಗೊಳ್ಳದ ಶಾಸನದಿಂದ ಸೇವಣರ ಕೂಚಮೂಪತಿಯ ಕನ್ನೇಶ್ವರ ದೇವಾಲಯಕ್ಕೆ ದತ್ತಿಬಿಟ್ಟ ವಿಚಾರ (ಅವರಗೊಳ್ಳದ ಬೃಹತ್ ಈಶ್ವರಲಿಂಗವೇ ಅಂದಿನ ಕನ್ನೇಶ್ವರ) ಹಾಗೂ ಬೇತೂರಿನ ಕಲ್ಲೇಶ್ವರ ದೇವಾಲಯಗಳ ಶಾಸನದಿಂದ ದಾವಣಗೆರೆ ಇವರ ಆಳ್ವಿಕೆಗೆ ಒಳ್ಳಪಟ್ಟಿತ್ತು ಎಂದು ಸಮರ್ಥಿಸಬಹುದಾಗಿದೆ.

ಕ್ರಿ.ಶ. ೧೨೪೭-೧೨೬೦ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಯಾದವ ಕನ್ನರನ ಅಥವಾ ಕೃಷ್ಣನ ಉಲ್ಲೇಖ ನೀಡುವ ಮೊದಲ ಶಾಸನ ದಾವಣಗೆರೆ ತಾಲೂಕಿನ ಗಂಗನರಸಿಯಲ್ಲಿರುವ ವೀರಗಲ್ಲಿನ ಮೇಲಿದೆ.[೨೬] ಈತನ ಕಾಲದ ಮತ್ತೊಂದು ಶಾಸನ ದಾವಣಗೆರೆ ತಾಲೂಕಿನ ಚಿಕ್ಕಬಿದರೆ ಗ್ರಾಮದ ಕಲ್ಲೇಶ್ವರ ದೇವಾಲಯದಲ್ಲಿದೆ. ಕ್ರಿ.ಶ. ೧೨೫೮ರಲ್ಲಿ ರಚನೆಗೊಂಡಿರುವ ಈ ಶಾಸನವು[೨೭]

ನೊಳಂಬವಾಡಿ ೩೨೦೦೦ ಪ್ರದೇಶದ ಜಿಕ್ಕಿಗ-೭೦ರಲ್ಲಿ ತುಂಗಭದ್ರ ನದಿಯ ಪೂರ್ವತೀರದ ಜಿದರೆ ಗ್ರಾಮದಲ್ಲಿ ಕಲ್ಲೇಶ್ವರ ದೇವಾಲಯವನ್ನು ನಿರ್ಮಿಸಿ ದತ್ತಿಬಿಟ್ಟ ವಿವರಗಳನ್ನು ನೀಡುತ್ತವೆ. ಅಲ್ಲದೆ ಕ್ರಿ.ಶ. ೧೨೮೦ರಲ್ಲಿ ದೇವಗಿರಿಯ ಈ ಯಾದವರು ಬೇತೂರಿನಲ್ಲಿ ಪ್ರಾಂತಿಯ ಅಡಳಿತವನ್ನು ರಚಿಸಿಕೊಂಡು ಆಳಿದ್ದಾರೆ. ಈ ಸೇವಣರು ಹರಿಹರದಲ್ಲಿರುವ ದೇವರ ಅನನ್ಯ ಭಕ್ತರಾಗಿದ್ದು, ಅನೇಕ ದಾನ-ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ.

**ವಿಜಯನಗರದ ಅರಸರು**

ಕರ್ನಾಟಕದ ಚಾರಿತ್ರಿಕ ಭೂಪಟದಲ್ಲಿ ವಿಜಯನಗರ ಅರಸರದು ಬಹುಮುಖ್ಯವಾದ ಹೆಸರಾಗಿದೆ. ಹೊಯ್ಸಳರ ಕೊನೆಯ ದೊರೆ ನಾಲ್ಕನೆಯ ಬಲ್ಲಾಳ ಪಟ್ಟಕ್ಕೆ ಬರುವ ವೇಳೆಗೆ ಹೊಯ್ಸಳ ಸಾಮ್ರಾಜ್ಯ ಮಹಮದಿಯರ ಕೈಗೆ ಸಿಕ್ಕು (ಕ್ರಿ.ಶ.೧೩೧೦) ನರಳಿ, ಕ್ರಿ.ಶ. ೧೩೪೨-೪೩ರಲ್ಲಿ ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. ೧೩೩೪-೧೫೬೫ರವರೆಗೆ ಅಳ್ವಿಕೆ ನಡೆಸಿದ ವಿಜಯನಗರ ಅರಸರು ನೇರವಾಗಿ ಇಲ್ಲವೇ ಅವರ ಸಾಮಂತರು ದಾವಣಗೆರೆ ಪರಿಸರವನ್ನು ದಕ್ಷವಾಗಿ ಆಳಿರಬಹುದು. ಕ್ರಿ.ಶ. ೧೩೫೪ರಿಂದ ಸದಾಶಿವರಾಯನ ಕಾಲದವರೆಗಿನ ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿವೆ. ಅವುಗಳು ಇವರ ಚರಿತ್ರೆಯನ್ನು ರಚಿಸಲು ಸಹಾಯಕವಾಗಿವೆ. ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರದರಸರು ನೇರವಾಗಿ ಇಲ್ಲವೇ ಪರೋಕ್ಷವಾಗಿ ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರು. 'ಬೆಮ್ಮತ್ತನಕಲ್ಲುನ್ನು' ಕೇದ್ರವನ್ನಾಗಿ ಮಾಡಿಕೊಂಡು ವಿಜಯನಗರದ ಪ್ರತಿನಿಧಿ 'ಮಲ್ಲಿನಾಥ ಒಡೆಯ' ಎಂಬುವನು ಆಡಳಿತ ನಡೆಸುತ್ತಿದ್ದನೆಂದು ತಿಳಿದುಬರುತ್ತದೆ. ಇವರು ಆಡಳಿತ ಸುಗಮವಾಗಿರಬೇಕೆಂದು ತಮ್ಮ ಅಧೀನ ಸಂಸ್ಥಾನಗಳನ್ನು ವಿಭಾಗಿಸುತ್ತಿದ್ದರು. ಅನೇಕ ಗ್ರಾಮಗಳನ್ನು ಸೇರಿಸಿ ಸೀಮೆಯೆಂದು, ಅನೇಕ ಸೀಮೆಗಳನ್ನು ಸೇರಿಸಿ ವೆಂತೆಯೆಂದು, ಅನೇಕ ವೆಂತೆಗಳನ್ನು ಸೇರಿಸಿ ಚಾವಡಿ ಎಂದು ವಿಭಾಗಿಸಿ ಆಳುತ್ತಿದ್ದರು. ಆಗ ಈ ಪರಿಸರದ ಪಕ್ಕದ ಹರಿಹರವು ಸೀಮೆಯಾಗಿ, ಉಚ್ಚಂಗಿದುರ್ಗವು ವೆಂತೆಯಾಗಿ, ಕೊಟ್ಟೂರು ಚಾವಡಿಯಾಗಿದ್ದವು. ಅಂದಿನ ವಿಜಯನಗರ ಸಾಮ್ರಾಜ್ಯದ ಕೊಟ್ಟೂರು ಚಾವಡಿಗೆ ದಾವಣಗೆರೆಗೆ ಸೇರಿತ್ತು[೨೨] ಎಂದು ತಿಳಿಯುತ್ತಾದೆ.

**ಚಿತ್ರದುರ್ಗ ಪಾಳೆಯಗಾರರು**

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಅಗ್ರಮಾನ್ಯ ಪಾಳೆಯಪಟ್ಟುಗಳಲ್ಲಿ ಅಥವಾ ಸಂಸ್ಥಾನಗಳಲ್ಲಿ ಚಿತ್ರದುರ್ಗವೂ ಒಂದಾಗಿದೆ. ಕ್ರಿ.ಶ. ೧೬ನೇ ಶತಮಾನದ ಪೂರ್ವಾರ್ಧದಿಂದ ೧೮ನೇ ಶತಮಾನದ ಉತ್ತರಾರ್ಧದವರೆಗೆ ಅಸ್ತಿತ್ವದಲ್ಲಿತ್ತು. ಈ ಅವಧಿಯಲ್ಲಿ ಇದನ್ನು ಆಳಿದ ಪ್ರಭುಗಳು 'ಚಿತ್ರದುರ್ಗ ಪಾಳೆಯಗಾರರು' ಎಂದು ಹೆಸರಾಗಿದ್ದಾರೆ. ಪರಂಪರೆಯಿಂದ ಹೇಳುವಂತೆ ಮೂಲತಃ ಮ್ಯಾಸಬೇಡ ಜನಾಂಗದವರಾದ ಇವರು, ವಾಲ್ಮೀಕಿ

ಗೋತ್ರದವರು, ಕಾಮಗೇತಿ ವಂಶದವರು ಎಂದು ಶಾಸನಗಳಿಂದ ತಿಳಿದುಬರುತ್ತದೆ. ಚಿತ್ರದುರ್ಗಕ್ಕೆ ಪೂರ್ವಕಾಲದಿಂದಲೂ ಕೋಟೆ ಇದ್ದಿತಾದರೂ, ಹೆಚ್ಚು ಸಂಖ್ಯೆಯ ಮತ್ತು ಬಲಿಷ್ಠವಾದ ಕೋಟೆಯ ಸುತ್ತುಗಳನ್ನು ನಿರ್ಮಿಸಿ ಇದನ್ನು 'ದುರ್ಗ'[೨೮] ಎಂಬ ಹೆಸರಿಗೆ ಪಾತ್ರವಾಗುವಂತೆ ಮಾಡಿದರು. ಚಿತ್ರದುರ್ಗದ ಪಾಳೆಯಗಾರರ ಮೂಲಪುರುಷ ತಿಮ್ಮಣ್ಣ ನಾಯಕ. ವಿಜಯನಗರ ಅರಸರ ಕಾಲದಲ್ಲಿ ಸಣ್ಣಪುಟ್ಟ ಪಾಳೆಯಗಾರರು ಅಮರ ಮಾಗಣಿಗಳನ್ನು ಪಡೆದು ಅಮರನಾಯಕರಾಗಿ ಸಾಮ್ರಾಜ್ಯಕ್ಕೆ ಅಧೀನರಾಗಿ ಆಳುತ್ತಿದ್ದರು. ಆಗ ದಾವಣಗೆರೆ ತಾಲೂಕಿನ ಮತ್ತಿಗ್ರಾಮದ ಮತ್ತಿ ತಿಮ್ಮಣ್ಣನಾಯಕನು ಹೊಳಲ್ಕೆರೆ ಸೀಮೆಯನ್ನು ಅಮರಮಾಗಣಿಯನ್ನಾಗಿ ಪಡೆದಿದ್ದನು. ವಿಜಯನಗರ ಸಾಮ್ರಾಜ್ಯ ಪತನಗೊಂಡಾಗ ಸ್ವತಂತ್ರರಾದ್ದ ಚಿತ್ರದುರ್ಗ ಪಾಳೆಯಪಟ್ಟಿಗೆ ದಾವಣಗೆರೆ ಒಳಪಟ್ಟಿತು. ಪಾಳೆಯಗಾರರ ಕಾಲದಲ್ಲಿ ದಳವಾಯಿ ಮುದ್ದಣ್ಣ, ಚಿಕ್ಕಣ್ಣನಾಯಕರು ತುರುಕರ ಮೇಲೆ ಬಾತಿಗುಡ್ಡದ ಬಳಿ ಯುದ್ಧಮಾಡಿದಾಗ ಕ್ರಿ.ಶ. ೧೭೪೮ರಲ್ಲಿ ಹರಪನಹಳ್ಳಿಯ ಸೋಮಶೇಖರರಾಯನಿಗೂ ಚುತ್ರದುರ್ಗದ ಹಿರೇಮದಕರಿನಾಯಕನಿಗೂ ದಾವಣಗೆರೆ ಹತ್ತಿರದ ಮಾಯಕೊಂಡದಲ್ಲಿ ಕದನ ನಡೆದಾಗ ಅಪರೋಕ್ಷವಾಗಿ ಹತ್ತಿರದ ದಾವಣಗೆರೆಗೂ ಲಡಾಯಿಯ ಬಿಸಿ ತಾಗಿರಬಹುದು.

**ಬೆಳಗುತ್ತಿ ಸಿಂದರು**

ಗಂಗರಂತೆ ಸಿಂದರು ಉತ್ತರ ಭಾರತದಿಂದ ದಕ್ಷಿಣದ ಕಡೆಗೆ ಬಂದವರೆಂದು ಆದರೆ ಸಿಂದರು ತಾವು ಯಾವುದೇ ಪ್ರಾಚೀನ ರಾಜವಂಶಕ್ಕೆ ಸೇರಿದ್ದವರೆಂದು ಹೇಳಿಕೊಂಡಿಲ್ಲ. ಇವರ ಮೂಲದ ಬಗ್ಗೆ ಹಲವಾರು ದಂತ ಕಥೆ ಇವೆ. ಬೆಳಗುತ್ತಿಯ ಸಿದ್ಧೇಶ್ವರ ದೇವಾಲಯದಲ್ಲಿನ ಶಾಸನದಲ್ಲಿ ಶಿವಸಿಂದು ಪ್ರಿಯಸಂಗದಿಂದೋದನದೊರ್ವಂ ಕುಮಾರಂ ಮಹೋತ್ಸವದಿಂದಂ ಎಂದು ಹೇಳಿರುವಂತೆ ಈ ವಂಶದ ಮೂಲ ಪುರುಷ ನಿಡುದೋಳ ಸಿಂದನು. ಬೆಳ್ಳಗುತ್ತಿ ಇಂದಿನ ದಾವಣಗೆರೆ ಜಿಲ್ಲೆಯ ಪರಿಸರದಲ್ಲಿ ಹೊನ್ನಾಳಿ ತಾಲೂಕಿನಲ್ಲಿದೆ.[೩೦] ನಿಡುದೋಳ ಸಿಂದ ವಂಶದ ಒಂದು ಶಾಖೆ ಇಲ್ಲಿ ಆಡಳಿತ ನಡಸಿ. ನೀಲಧ್ವಜದ ಮೇಲೆ ಹುಲಿಯ ಲಾಂಛನ ಹೊಂದಿದ್ದರು. ಬೆಳಗುತ್ತಿಯಲ್ಲಿ ಆಳುತ್ತಿದ್ದ ಜಾತರಸ, ನನ್ನಿಯ ಸಂಭ, ಕಯವೀರರಸ, ಚಟ್ಟರಸ ಮತ್ತು ಅವನ ಮಗ ಚೋಗರ ಹೆಸರು ಶಾಸನಗಳಲ್ಲಿದೆ. ೯೯೨ರ ಹರಿಹರ ತಾಲ್ಲೂಕಿನ ವಾಸನ ಶಾಸನ ಸಿಂದ ಜಾತರಸನು ಕದಂಬಳಿಗೆ ಸಾವಿರದೊಳಗಣ ಮುಳುಗುಂದ ೧೨ನ್ನು ಆಳುತ್ತಿದ್ದರೆಂದು ತಿಳಿಸುತ್ತದೆ.

**ಹೊನ್ನಾಳಿಯ ನವಾಬರು**

ದಾವಣಗೆರೆ ಜಿಲ್ಲೆಯ ಹೋಬಳಿ ಕೇಂದ್ರವಾದ ಹೊನ್ನಾಳಿಯಿಂದ ಕೆಲಕಾಲ ಆಳ್ವಿಕೆ ನಡೆಸಿದ ನವಾಬರದು ಮುಸ್ಲಿಂ ರಾಜ ಮನೆತನವಾಗಿದೆ. ವಿಜಯನಗರದ ಅರಸರು ಆಳ್ವಿಕೆ ನಡೆಸುತ್ತಿದ್ದ ಕರ್ನಾಟಕದ ಉತ್ತರ ಭಾಗದಲ್ಲಿ ಆ ಕಾಲಕ್ಕೆ ಪ್ರಬಲರಾದ ಆದಿಲ್‌ಶಾಹಿಗಳು ತಮ್ಮ ಸಾಮ್ರಾಜ್ಯ

ಹೆಚ್ಚಿಸಲು ದಕ್ಷಿಣದ ಕಡೆಗೆ ಬಂದರು. ೧೬೮೬ರಲ್ಲಿ ಮೊದಲು ಮೊಗಲರ ಆಸ್ಥಾನದಲ್ಲಿದ್ದು, ಅನಂತರ ಬಿಜಾಪುರ ಆದಿಲ್‌ಶಾಹಿಗಳ ಕೈ ಕೆಳಗೆ ಆಧಿಕಾರಿಯಾಗಿದ್ದ ಕುತುಬ್ ಉಲ್ ಮುಲ್ಕ, ಷೇರ್ ಖಾನ್ ಜಮಾದ್ ಎಂಬುವರು ಹೊನ್ನಾಳಿ, ಹರಿಹರ, ಸವಣೂರು ಪ್ರಾಂತ್ಯಗಳ ನವಾಬರಾಗಿ ನೇಮಕವಾದರು. ಇವರೇ ಮುಂದೆ ಹೊನ್ನಾಳಿ ನವಾಬರೆಂದು ಕರೆಯಲ್ಪಟ್ಟರು.[೩೧] ಇವರ ನಂತರದಲ್ಲಿ ಅಷರ್ ಚೌಧ್ಧಿ ಅಹ್ಮದ್, ಮಹ್ಮದ್ ಖಾನ್, ಸಲಾಖತ್ ಖಾನ್, ಅಮೀನ್ ಉಲ್ ಮಿಲ್ಕ ಎಂಬುವರು ನವಾಬರಾಗಿ ಆಡಳಿತ ನಡೆಸಿದರೆಂದು ಇತ್ತಿಚಿಗೆ ದೊರೆತ ಮೆಕೆಂಜಿ ಕೈಫಿಯತ್ತಿನಿಂದ ತಿಳಿದುಬರುತ್ತದೆ. ಈ ನವಾಬರು ಹೈದರ್ ಮತ್ತು ಟಿಪ್ಪುವಿನ ಹತ್ತಿರದ ಒಡನಾಡಿಯಾಗಿದ್ದರು. ಹೀಗಾಗಿ ಬ್ರಿಟಿಷರ ವಿರುದ್ಧ ನಡೆದ ಎರಡು ಮತ್ತು ಮೂರನೆಯ ಮೈಸೂರು ಯುದ್ಧದಲ್ಲಿ ಭಾಗಿಯಾಗಿ ಹೊರಡಿದರು.

**ಹೈದರ್ ಮತ್ತು ಟಿಪ್ಪು ಸುಲ್ತಾನ್**

೧೭-೧೮ನೇ ಶತಮಾನದಲ್ಲಿ ಅಧಿಕಾರದಲ್ಲಿದ್ದ ಹೈದರ್ ಮತ್ತು ಟಿಪ್ಪುವಿನ ಆಡಳಿತ ಕರ್ನಾಟಕದ ಬಹುಭಾಗವನ್ನು ಆವರಿಸಿಕೊಂಡಿತ್ತು. ಹೈದರ್ ಆಡಳಿತದ ಸಮಯದಲ್ಲಿ ಮರಾಠಿ ಸರದಾರ ಅಪ್ಪೋಜಿರಾಯ ಎಂಬುವನು ಅತ್ಯಂತ ನಿಷ್ಠಾವಂತನಾಗಿದ್ದುದರಿಂದ, ಹೈದರ್‌ನು ಈ ಅಪ್ಪೋಜಿರಾಯನಿಗೆ ದಾವಣಗೆರೆಯನ್ನು ಜಹಗೀರಿಯನ್ನಾಗಿ ಇನಾಂ ನೀಡಿದ್ದು ಕಂಡುಬರುತ್ತದೆ. ಜಹಗೀರಿಯಾಗಿ ನೀಡಿರುವ ಕಾಲಕ್ಕೆ ದಾವಣಗೆರೆ ಒಂದು ಹಳ್ಳಿಯಾಗಿತ್ತು. ಆದರೆ ಅಪ್ಪೋಜಿರಾಯನು ತನಗೆ ಜಹಗೀರಿಯಾಗಿ ದೊರೆತ ದಾವಣಗೆರೆಯನ್ನು ಅಭಿವೃದ್ಧಿಪಡಿಸುವಲ್ಲಿ ತುಂಬಾ ಶ್ರಮವಹಿಸಿದನು[೩೨]. ಹೊರಗಿನಿಂದ ಮರಾಠ ವ್ಯಾಪಾರಿಗಳನ್ನು ಕರೆತಂದು ದಾವಣಗೆರೆ ಶ್ರಮಿಸಿದನು. ವ್ಯಾಪಾರ ಸ್ಥಳವಾಗಲು ಆದರೆ ಮುಂದೆ ದಾವಣಗೆರ ಮರಾಠಿಗರದಾಗಿ ಉಳಿಯಲಿಲ್ಲ. ಕಾರಣ ಅಪ್ಪೋಜಿರಾಯನು ಉತ್ತರಾಧಿಕಾರಿಗಳಿಲ್ಲದೆ ಮರಣ ಹೊಂದಿದ್ದರಿಂದ ಟಿಪ್ಪುಸುಲ್ತಾನನು ದಾವಣಗೆರೆಯ ಜಹಗೀರನ್ನು ಹಿಂದಕ್ಕೆ ಪಡೆದ ಆ ಮುಂದೆ ಕ್ರಿ.ಶ. ೧೭೯೦-೯೨ರಲ್ಲಿ ಬ್ರಿಟಿಷರಿಗೆ ಟಿಪ್ಪು ಸೋತಾಗ ಅವರಿಗೆ ಕೊಡಬೇಕಾಗಿದ್ದ ಪರಿಹಾರಕ್ಕಾಗಿ ಹರಿಹರದ ತುಂಗಭಗ್ರಾನದಿಯ ಉತ್ತರ ಭಾಗವನ್ನು ೩.೫ ಕೋಟಿ ರೂಪಾಯಿಗಳಿಗೆ ಮರಾಠರಿಗೆ ಮಾರಿದನು. ಆಗ ಹರಿಹರ ದಾವಣಗೆರೆಗಳೂ ಮೈಸೂರು ರಾಜ್ಯದ ಗಡಿ ಪ್ರದೇಶವಾಗಿದ್ದವು. ಕ್ರಿ.ಶ. ೧೭೯೯ರಲ್ಲಿ ಬ್ಯಾರಿಕ್ಲೋಸ್ ಎನ್ನುವ ಬ್ರಿಟಿಷ್ ಅಧಿಕಾರಿ ಮೈಸೂರು ರೆಸಿಡೆಂಟ್ ಆಗಿದ್ದಾಗ ಹರಿಹರದಲ್ಲಿ ಬ್ರಿಟಿಷ್ ಸೈನಿಕ ಠಾಣೆ ಪ್ರಾರಂಭವಾಗಿತ್ತು. ಬ್ರಿಟಿಷ್ ಸೈನಿಕರು ದಾವಣಗೆರೆ ಮಾರ್ಗವಾಗಿಯೇ ಹೋಗಬೇಕಾಗಿತ್ತು.

### ಮೈಸೂರು ಒಡೆಯರು

ಟಿಪ್ಪುವಿನ ವಿಶಾಲ ಮೈಸೂರು ರಾಜ್ಯವನ್ನು ವಿಭಜನಾ ಕರಾರು ಪ್ರಕಾರ ನಾಲ್ಕು ಭಾಗ ಮಾಡಿದರು. ಮರಾಠರು, ನಿಜಾಮ ಮತ್ತು ಬ್ರಿಟಿಷರು ತಲಾ ಒಂದು ಭಾಗ ಹಂಚಿಕೊಂಡರು. ಉಳಿದ ಒಂದು ಭಾಗವನ್ನು ಮೈಸೂರು ಒಡೆಯರಿಗೆ ಅನೇಕ ಷರತ್ತುಗಳ ಮೇಲೆ ಅಧಿಕಾರ ನೀಡಿದ್ದರು.[೩೩] ಕ್ರಿ.ಶ. ೧೮೧೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಅಧಿಕಾರ ವಹಿಸಿಕೊಂಡಾಗ, ತಮ್ಮ ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ ೧೮ ಆಡಳಿತ ಕಛೇರಿಗಳನ್ನು, ೧೨೫ ಗಡಿ ತಾಲೂಕುಗಳನ್ನು, ೬ ಫೌಜದಾರಿ ಅಥವಾ ತುಕಡಿಗಳನ್ನು ಸ್ಥಾಪಿಸಿದರು. ಅದರಲ್ಲಿ ಚಿತ್ರದುರ್ಗ ತುಕಡಿಯೂ ಒಂದಾಗಿದ್ದು. ಈ ತುಕಡಿಯಲ್ಲಿ ದಾವಣಗೆರೆಯೂ ಒಂದು ತಾಲ್ಲೂಕು ಆಗಿತ್ತು. ಆಗ ಒಬ್ಬ ಸುಭೆದಾರ, ಪೇಷ್ಕಾರ, ಇಬ್ಬರು ಶಿರಸ್ತೆದಾರರು, ಒಬ್ಬಗುಮಾಸ್ತ, ಒಬ್ಬ ಮುನ್ಷಿ, ಓಲೆಕಾರ, ಕಿಲ್ಲೇದಾರ, ಠಾಣಾದಾರ, ಅಂಚೆಮುತ್ಸದ್ದಿ, ಗೌಡ, ಶ್ಯಾನುಭೋಗ, ಷೇಕುದಾರ, ಒಬ್ಬ ಫೌಜುದಾರ ಇಷ್ಟು ಜನ ದಾವಣಗೆರೆ ತಾಲೂಕಿನ ಅಧಿಕಾರಿಗಳಾಗಿದ್ದರು ಎಂದು ತಿಳಿದು ಬರುತ್ತದೆ.

### ಅಡಿ ಟಿಪ್ಪಣಿಗಳು

೦೧. ಸದಾಶಿವಪ್ಪ ಶ್ಯಾಗಲೆ ಬಿ.ಎಂ., ೨೦೧೦, ದಾವಣಗೆರೆ ಜಿಲ್ಲೆ ಒಂದು ಪಕ್ಷಿನೋಟ, ಪುಟ.೧

೦೨. ಸತ್ಯನ್ ಬಿ.ಎಸ್., ೧೯೭೫, ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್, ಪುಟ ನಂ.೮-೧೨

೦೩. ವಿಶ್ವನಾಥ, ೧೯೯೬, ಸ್ಥಳನಾಮಗಳು, ಪುಟ .೧

೦೪. ಈಶ್ವರಪ್ಪ ಎಂ.ಜಿ., ೨೦೦೧, ಶತಮಾನದ ದಾವಣಗೆರೆ, ಪುಟ.೨

೦೫. ಗಿರಿಜಾ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ.೨೧

೦೬. ತಿಪ್ಪೇಸ್ವಾಮಿ ಹೆಚ್., ೨೦೦೦, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪುಟ.೭

೦೭. ಕುಮಾರ್ ಬಿ.ಪಿ., ೨೦೦೭, ದಾವಣಗೆರೆ ಹತ್ತಿ ಗಿರಣಿ ಕಾರ್ಮಿಕರ ಚಳುವಳಿಗಳು, ಪುಟ.೨೮

೦೮. ಅದೆ ಪುಟ.೨೯

೦೯. ಸುರೇಶ ಬಿ., ೨೦೦೯, ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪುಟ.೧೦

೧೦. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪುಟ.೧೪

೧೧. ಬುರುಡೆಕಟ್ಟೆ ಮಂಜಪ್ಪ, ೨೦೧೩, ಬಾತಿಯ ಬೆಳಗು, ಪುಟ.೧೦

೧೨. ಶಿವತಾರಕ್ ಜಿ.ಕೆ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪುಟ.೧೪

೧೩. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪುಟ.೮

೧೪. ಬುರುಡೆಕಟ್ಟೆ ಮಂಜಪ್ಪ. ಪೂರ್ವೋಕ್ತ, ಪುಟ.೧೧

೧೫. ಕುಮಾರ್ ಬಿ.ಪಿ., ಪೂರ್ವೋಕ್ತ, ಪುಟ.೩೦

೧೬. ಈಶ್ವರಪ್ಪ ಎಂ.ಜಿ., ೧೯೯೨, ದವನಸಿರಿ, ಪುಟ.೬೦

೧೭. ವಾಸುದೇವ ಬಡಿಗೇರ, ಪೂರ್ವೋಕ್ತ, ಪುಟ.೪೭

೧೮. ಅದೇ ಪುಟ.೪೮

೧೯. ತಿಪ್ಪೇಸ್ವಾಮಿ ಹೆಚ್., ಪೂರ್ವೋಕ್ತ, ಪುಟ.೨೩

೨೦. ಸುರೇಶ ಬಿ., ಪೂರ್ವೋಕ್ತ, ಪುಟ.೨೨

೨೧. ಎ.ಕ. ಸಂ. ೧೧. ದಾವಣಗೆರೆ ಶಾ.ಸಂ.೧೦೭-೧೧೯

೨೨. ಎ.ಕ. ಸಂ. ೧೧. ದಾವಣಗೆರೆ ಶಾ.ಸಂ.೧೨೪

೨೩. ಈಶ್ವರಪ್ಪ ಎಂ.ಜಿ., ಪೂರ್ವೋಕ್ತ, ಪುಟ.೬೧

೨೪. ತಿಪ್ಪೇಸ್ವಾಮಿ ಹೆಚ್. ಪೂರ್ವೋಕ್ತ, ಪುಟ.೪೩

೨೫. ಅಂಬಳಿಕೆ ಹಿರಿಯಣ್ಣ, ೨೦೦೯, ಕನ್ನಡ ವಿಷಯ ವಿಶ್ವಕೋಶ, ಪುಟ.೨೧೬

೨೬. ಎ.ಕ., ೧೧., ದಾವಣಗೆರೆ ಶಾ.ಸಂ.೪೮

೨೭. ಎ.ಕ., ೧೧., ದಾವಣಗೆರೆ ಶಾ,ಸಂ,೧೦೩

೨೮. ಈಶ್ವರಪ್ಪ ಎಂ.ಜಿ., ಪೂರ್ವೋಕ್ತ, ಪುಟ.೬೨

೨೯. ಗೋಪಾಲ್ ಆರ್.೨೦೦೫, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ.೧೧೨

೩೦. ಅದೇ, ಪುಟ.೨೨೦

೩೧. ಅದೇ, ಪುಟ.೨೨೫

೩೨.. ಅದೇ, ಪುಟ.೨೨೧

೩೩. ಶಿವಪ್ಪ ಜಿ ಅರಿವು., ೨೦೧೨, ಇತಿಹಾಸ ಜ್ಞಾನಕೋಶ, ಪುಟ.೧೨೯

***

## ಅಧ್ಯಾಯ : ಮೂರು

---

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

೩.೧ ದೇವಾಲಯಗಳು

೩.೨ ಮೂರ್ತಿಶಿಲ್ಪಗಳು

೩.೩ ಕೆರೆಗಳು

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

## ೩.೧ ದೇವಾಲಯಗಳು

ಕರ್ನಾಟಕದ ತುಂಬಾ ಓಡಾಡಿದ ಯಾವುದೇ ವ್ಯಕ್ತಿಗೆ ಪ್ರತಿ ಹಳ್ಳಿಯಲ್ಲಿ, ನದಿ ದಡದಲ್ಲಿ, ಬೆಡ್ಡದ ಮೇಲೆ, ಊರ ಮಧ್ಯದಲ್ಲಿ, ಊರಿನ ಯಾವುದೇ ಸಾರ್ವಜನಿಕ ಸ್ಥಳದಲ್ಲಿ, ಹೀಗೆ ಒಂದಲ್ಲ ಒಂದು ಕಡೆ ದೇವಸ್ಥಾನಗಳು ಕಂಡು ಬರುತ್ತವೆ. ಆ ದೇವಸ್ಥಾನಗಳಲ್ಲಿರುವ ದೇವತೆ ಗ್ರಾಮದೇವತೆಯಾಗಿರಬಹುದು. ಊರಿನ ಒಂದು ಪಂಗಡದ ಅಧೀದೇವತೆಯಾಗಿರಬಹುದು. ಆ ದೇವಸ್ಥಾನವನ್ನು ಕಟ್ಟಿಸಿ ಪೋಷಿಸಿದವನ ಇಷ್ಟದೇವತೆಯಾಗಿರಬಹುದು. ದೇವತೆ ಯಾವುದಾದರೂ ಅದರ ಆರಾಧನೆಯ ಉದ್ದೇಶ, ಹಿನ್ನೆಲೆ ಎಲ್ಲರಿಗೂ ಒಂದೆಯಾಗಿರುತ್ತದೆ. ಈ ಕಾರಣದಿಂದಲೇ ರಾಜರ, ಅಧಿಕಾರಿಗಳ ಆಶ್ರಯದೊಂದಿಗೆ ಊರಿನ ಜನರ ಆರಕ್ಕೈಯಲ್ಲಿ ದೇವಸ್ಥಾನಗಳು ಬೆಳೆದು ಬಂದಿರುತ್ತವೆ. ಮಾನವನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಧಾರ್ಮಿಕ ನಂಬಿಕೆಯೂ ಒಂದಾಗಿದ್ದು. ಇದರ ಹಿನ್ನೆಲೆಯಲ್ಲಿ ಸಾಗಿಬಂದ ನಂಬಿಕೆ, ಆಚಾರ–ವಿಚಾರ, ಸಂಪ್ರದಾಯ, ಹಬ್ಬ–ಹರಿದಿನಗಳು, ಜಾತ್ರೆ–ಉತ್ಸವಗಳು, ಮೊದಲಾದ ಆಚರಣೆಗಳು ಕಂಡುಬರುತ್ತದೆ. ಇವುಗಳಲ್ಲಿ ಪ್ರಕೃತಿ ನಿರ್ಮಿತ ವಸ್ತುಗಳು ಆಚರಣೆಯಲ್ಲಿ ಪ್ರಮುಖವಾಗಿದ್ದವು. ಕಾಲ ಕಳೆದಂತೆ ಇವುಗಳ ಹೆಸರಿನಲ್ಲಿ ಮತ್ತು ಪ್ರಮುಖ ಧಾರ್ಮಿಕ ವ್ಯಕ್ತಿಗಳನ್ನು ಮೂರ್ತಿರೂಪಕ್ಕಿಳಿಸಲಾಯಿತು. ಇವುಗಳಿಗಾಗಿ ದೇವಾಲಯಗಳ ನಿರ್ಮಾಣ ಪ್ರಾರಂಭವಾಯಿತು. ಹಿಗೇ ಅಭಿವೃದ್ಧಿಯನ್ನು ಕಂಡ ದೇವಾಲಯ ಮತ್ತು ಮೂರ್ತಿಶಿಲ್ಪ ಕಲೆ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ. ಕ್ರಿ.ಶ. ೬ನೇ ಶತಮಾನದ ನಂತರ ಈ ದೇವಾಲಯ ಮತ್ತು ಅವುಗಳ ಭಾಗವಾಗಿ ಮಠಗಳು ಸಾಮಾಜಿಕ ವ್ಯವಸ್ಥೆಗಳಲ್ಲಿ ಪರಿಣಾಮಕಾರಿಯಾದ ಪ್ರಭಾವ ಬೀರಿದವೆ. ಮಾನವರ ಅಭಿವೃದ್ಧಿಯಲ್ಲಿ ಪ್ರಮುಖ ಸ್ಥಾನವಹಿಸಿಕೊಂಡು ವಿಧ್ಯಾಭ್ಯಾಸದ ಸ್ಥಳವಾಗಿ, ನ್ಯಾಯಾಲಯವಾಗಿ, ಹಣಕಾಸಿನ ಖಂಜಾನೆಗಳಾಗಿ ದೆವಾಲಯಗಳು ಶ್ರೀಮಂತ ಸ್ಥಾನಕ್ಕೇರಿದವು ಎಂದು ತಿಳಿದು ಬರುತ್ತದೆ.

ವಾಸ್ತುಶಿಲ್ಪದ ಪ್ರಾಥಮಿಕ ಹೆಜ್ಜೆ ಎಂದರೆ ತನಗಾಗಿ ಕಟ್ಟಿಕೊಂಡ ಮನೆ 'ಗೃಹವಾಸ್ತುಶಿಲ್ಪ' ಎನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು 'ಧಾರ್ಮಿಕ ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪ'[೧] ಎಂದು ತಿಳಿದು ಬರುತ್ತದೆ. ಇಂದಿಗೂ ಕೂಡ ಸ್ಥಳೀಯ ಚರಿತ್ರೆ ರಚನೆಗೆ ಸಹಾಯಕವಾಗಿರುವ ಆಕರಗಳಲ್ಲಿ ದೇವಾಲಯಗಳು ಅತ್ಯಂತ ಮಹತ್ವವನ್ನು ಪಡೆದುಕೊಂಡಿವೆ. ಇಂತಹ ದೇವಾಲಯಗಳ

ಅಧ್ಯಯನದಿಂದ ಸಂಸ್ಕೃತಿ, ಅವರ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ರಾಜಾಶ್ರಯ, ದತ್ತಿ, ಧರ್ಮ, ಸಾಂಸ್ಕೃತಿಕವಾದ ಹಬ್ಬ ಹರಿದಿನಗಳು, ಜಾತ್ರೆ ಮತ್ತು ಉತ್ಸಹಗಳು, ಸಂಗೀತ ಶಿಕ್ಷಣ ನ್ಯಾಯಿಕವಾದ ಅಂಶಗಳು ತಿಳಿಯಲು ಸಹಾಯಕವಾಗಿದೆ.

ವಾಸ್ತುಶಿಲ್ಪ ನಿರ್ಮಾಣದಲ್ಲಿ ಸಂಸ್ಕೃತಿಯ ಆಧ್ಯಾತ್ಮಿಕ ಚಿಂತನೆ ಅಥವಾ ಧಾರ್ಮಿಕ ಮೂಲ ಕಲ್ಪನೆಗೆ ಅಧಿಕ ಪ್ರಾಮುಖ್ಯತೆ ಇದ್ದರೂ, ಅದಕ್ಕೆ ವಿರುದ್ಧವಾದ ಕಾಮ, ಕರ್ಮಾಚರಣೆ ಮತ್ತು ಲೌಕಿಕ ಸುಖಗಳನ್ನೂ ಅಳವಡಿಸಲಾಗಿದೆ. ಶಿಲ್ಪಕಲೆಯು ಸಂಸ್ಕೃತಿಯ ಉಗಮ ವಿಕಾಸಗಳಿಗೆ ಮೂಲವಾಗಿದ್ದು, ಕಾಲನಿಕ್ರಮದ ಬೆಳವಣಿಗೆಯಲ್ಲಿ ದೇವಾಲಯ, ಮೂರ್ತಿಶಿಲ್ಪಗಳ ಶೈಲಿ, ಸನ್ನಿವೇಶ, ಸಂದರ್ಭಗಳನ್ನು ಒಳಗೊಂಡಿರುವುದು ಕಂಡು ಬರುತ್ತದೆ.[೨] ಮಾನವನ ಶಕ್ತಿಗೆ ಮೀರಿದ ತಂತಾನೇ ನಿಯಂತ್ರಿಸುವ ಬೇರೆಯದೇ ಆದ ಶಕ್ತಿ ಬಗ್ಗೆ ಪ್ರತಿಯೊಬ್ಬ ಜೀವಿಯ ಅರಿವಿಗೊ ಬರುತ್ತಿದ್ದು, ಜೊತೆಗೆ ಪ್ರಾಣಿ, ಮಳೆ, ಗುಡುಗು, ಸಿಡಿಲು ಮುಂತಾದ ಪ್ರಕೃತಿಯ ಶಕ್ತಿಗಳಿಂದ ಭಯಭೀತಗಿ ತಮ್ಮ ರಕ್ಷಣೆಗಾಗಿ ದೇವರ ಮೊರೆ ಹೋಗತೊಡಗಿದರು. ಎಲ್ಲಕ್ಕಿಂತಲೂ ಮಿಗಿಲಾಗಿ ದೇವರು ಎಂಬ ಅದ್ಭುತ ಶಕ್ತಿ ಇದೆ ಎಂಬ ನಂಬಿಕೆಯುಂಟಾಗಿ, ಆ ಶಕ್ತಿಯ ಮೇಲಿನ ಭಯದಿಂದ ಅಥವಾ ನಂಬಿಕೆಯಿಂದ ಹಾಗೂ ಸಹಜ ಕೂತೂಹಲದಿಂದ ನಿಸರ್ಗದ ರಹಸ್ಯಗಳನ್ನು ಅರಿಯಲು ಮುಂದಾದರು. ಅಷ್ಟೇ ಅಲ್ಲದೇ ನಿಸರ್ಗ ಶಕ್ತಿಗಳನ್ನು ಪವಿತ್ರ ಪೂಜಾರ್ಹ ಎಂದು ಭಾವಿಸಿ ಆರಾಧಿಸಲು ಪ್ರಾರಂಭಿಸಿದನು. ಇದ್ದರಿಂದ ಅಂತಹ ಅಗೋಚರ ಶಕ್ತಿಗೆ ಒಂದು ರೂಪ ನೀಡಿ, ಅದನ್ನು ಪ್ರತಿಮೆಯನ್ನಾಗಿಸಿ ಪೂಜಿಸವ ಪದ್ಧತಿ ಪ್ರಾರಂಭವಾಯಿತು. ಕ್ರಮೇಣ ಇಂತಹ ಪವಿತ್ರ ಸ್ಥಳಕ್ಕೆ ಬೇರೆ ಯಾರು ಅಜಾಗರೂಕರಾಗಿ ಓಡಾಡುವುದನ್ನು ನಿಷೇಧಿಸಿ, ಅದಕ್ಕೆ ರಕ್ಷಣೆಯನ್ನು ಒದಗಿಸಬೇಕೆಂದು ದೇವಾಲಯದ ರಚನೆ ಪ್ರಾರಂಭವಾಯಿತು.[೩]

ಮನುಷ್ಯನಿಗೆ ನಿರ್ಮಲವಾದ ಮನಸ್ಸನ್ನು ಪ್ರೇರೇಪಿಸಿ, ಪವಿತ್ರ ವಾತಾವರಣವನ್ನು ಸೃಷ್ಟಿಸುವುದು ದೇವಾಲಯದ ಮುಖ್ಯ ಉದ್ದೇಶವಾಗಿದೆ. ಹೀಗೆ ಹುಟ್ಟಿಸಿಕೊಂಡ ದೇವಾಲಯಗಳ ಕಲ್ಪನೆ, ರಚನೆ, ಸಿದ್ಧಾಂತ ವಿವಿಧ ಹಂತದಲ್ಲಿ ಬೆಳೆದು, ಅವು ಮುಂದೆ ನಾಡಿನ ಧಾರ್ಮಿಕ ಕೇಂದ್ರಗಳಾದವು. ಜನರ ಆಧ್ಯಾತ್ಮಿಕ ಭಾವದೊಂದಿಗೆ ದೇವಾಲಯಗಳು ನಿರ್ಮಾಣಗೊಂಡು ಆಯಾ ಕಾಲದಲ್ಲಿ ಪ್ರದೇಶದ ಸಂಸ್ಕೃತಿ, ಧರ್ಮ ಹಿನ್ನೆಲೆತಲ್ಲಿ ವಾಸ್ತುಶಿಲ್ಪ, ಮೂರ್ತಿಶಿಲ್ಪ ಎಲ್ಲಾ ಕಲೆಗಳ ಭಂಡಾರವೇ ಹೊಸ ರೂಪ ತಾಳಿದವು. ಅವು ವಿದ್ಯಾರ್ಜನೆಯ ಕೇಂದ್ರಗಳಾದವು. ಹೀಗೆ ಬೇರೆ ಬೇರೆ ಧರ್ಮದವರು ತಮಗೆ ತಕ್ಕ ಹಾಗೆ ದೇವಾಲಯಗಳನ್ನು ಕಟ್ಟಿಸಿಕೊಂಡರು, ಜೈನರು ಬಸದಿಗಳೆಂದು, ಬೌದ್ಧರು ಚೈತ್ಯಾಲಯಗಳೆಂದು, ಸಿಖ್ಖರು ಗುರುದ್ವಾರಗಳೆಂದು, ಮುಸ್ಲಿಂರು ಮಸೀದಿಗಳೆಂದು, ಕ್ರೈಸ್ತರು ಚರ್ಚ್‌ಗಳೆಂದು ಕರೆದುಕೊಂಡರು.

ಒಂದು ದೇಶದ ಹಿರಿಮೆ ಅಲ್ಲಿನ ಕಲೆ, ಸಂಸ್ಕೃತಿಯ ಪರಂಪರೆಯನ್ನು ಅವಲಂಬಿಸಿರುತ್ತದೆ. ಕಲೆ ಮೂಲತಃ ಮಾನವನ ಸೃಷ್ಟಿಯಾಗಿದೆ. ಅದು ಪ್ರತಿಭಾನ್ವಿತ ಮಾನವನ ಜೀವನಾನುಭವದ ಅಭಿವ್ಯಕ್ತಿಯಾಗಿದೆ. ಅದರಲ್ಲಿ ಜನಜೀವನವನ್ನು ಉದಾತ್ತಗೊಳಿಸಬಲ್ಲ ಶಕ್ತಿ ಅಡಗಿರುತ್ತದೆ. ಮಾನವ ಸಮಾಜವನ್ನು ಪರಿಷ್ಕರಿಸಿ ಮಾನವನನ್ನು ವಿಶ್ವಮಾನವನನ್ನಾಗಿಸುವುದೇ ಕಲೆಯ ಉದ್ದೇಶವಾಗಿದೆ. ಇತಿಹಾಸ ಒಂದು ಜನಾಂಗದ ಜೀವನ ಚರಿತ್ರೆಯಾದರೆ, ಕಲೆ ಎಂಬುದು ಆ ದೇಶದ ಅಥವಾ ಸಮಾಜದ ಆತ್ಮ ಚರಿತ್ರೆಯಾಗುತ್ತದೆ. ನಮ್ಮ ಪ್ರಾಚೀನ ಶಿಲ್ಪಚಿತ್ರಗಳು ಕೇವಲ ಕುರುಡು ಕುರುಡಾಗಿ ರಚಿತವಾದುದಲ್ಲ. ಅದು ಸೂತ್ರ, ವಿಧಾನ ಹಾಗೂ ಸಂಪ್ರದಾಯ ಬದ್ಧವಾಗಿರುತ್ತದೆ. ಅದಲ್ಲದೆ ರಾಜಕೀಯ, ಸಾಮಾಜಿಕ, ಧಾರ್ಮಿಕ ಬದಲಾವಣೆಗಳಿಗೆ ತನ್ನದೇ ಆದ ರೀತಿಯಲ್ಲಿ ಕಲೆಯ ವಿಕಾಸ ಮಾರ್ಗದಲ್ಲಿ ಹಲವು ವೈಶಿಷ್ಟ್ಯ ಲಕ್ಷಣಗಳನ್ನು ಪಡೆದುಕೊಂಡಿದೆ.

**ವಾಸ್ತುಶಿಲ್ಪದ ಪ್ರಾಚೀನತೆ**

ಗರುಡ ಪುರಾಣದಲ್ಲಿ ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಹೇಳಿದೆ. 'ನಿವಾಸಾತ್ ಸರ್ವ ಭೂತಾನಾಂ ವಾಸ್ತುರಿತಿ ಶಬ್ದಿತಃ' ಎಲ್ಲ ಪ್ರಾಣಿಗಳು ವಸತಿಗಾಗಿ ವಾಸ್ತು ಪದವು ಬಳಕೆಗೊಂಡಿದೆ. ಇದು ಅಮರ ಕೋಶದ ವ್ಯಾಖ್ಯೆ.[೪] 'ವಾಸ್ತು' ಎಂದರೆ ವಸತಿ ಯೋಗ್ಯ ಭೂಮಿ ಹಾಗೂ ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನು ಒಳಗೊಳ್ಳುತ್ತದೆ.[೫] ಪ್ರಸ್ತುತ ಅಧ್ಯಯನ ವ್ಯಾಪ್ತಿಯಾದ ದಾವಣಗೆರೆ ಕಸಬಾದಲ್ಲಿ ಕಂಡುಬರುವ ದೇವಾಲಯಗಳನ್ನು ಅಧ್ಯಯನ ಮಾಡುವುದಕ್ಕಿಂತ ಮುಂಚೆ ವಿವಿಧ ಕಾಲಘಟ್ಟದಲ್ಲಿ ದೇವಾಲಯಗಳ ವಿಕಾಸ ಹೊಂದಿದ ರೀತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ದೇವಾಲಯ ಧಾರ್ಮಿಕ ಶ್ರದ್ಧೆ, ನಂಬಿಕೆ, ಭಕ್ತಿಯ ಸಂಕೇತಗಳಾಗಿವೆ. ದೇವಾಲಯವನ್ನು ದೇವ+ಆಲಯ ಎಂದು ಬಿಡಿಸಿದಾಗ ದೇವ ಎಂದರೆ ದೇವರು, ಆಲಯ ಎಂದರೆ ಕಟ್ಟಡ ಎಂದು ತಿಳಿದುಬರುತ್ತದೆ. ವಾಸ್ತು ಅಂದರೆ ದೇವರು ವಾಸಿಸುವ ಜಾಗ, ಸ್ಥಳ, ಎಡೆ ಎಂದರ್ಥವಾಗುತ್ತದೆ.[೬] ವಾಸ್ತುಶಿಲ್ಪವೂ, ಆಯಾ ಕಾಲದ ಮತ್ತು ಆಯಾ ಜನಾಂಗದ ಅಂತರಿಕ ಆಕಾಂಕ್ಷೆ, ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದೆಂಬ ಎಂಬ ಹೇಳಿಕೆಯಲ್ಲಿ ಈ ಅಭಿಪ್ರಾಯ ಸೂಚಿತವಾಗಿದೆ.[೭]

ದೇವಾಲಯದ ಗರ್ಭ ಗುಡಿಯಲ್ಲಿರುವ ಮೂಲ ದೇವತೆಗಳ ಆಧಾರದ ಮೇಲೆ ವಿವಿಧ ಮತ, ಧರ್ಮಗಳನ್ನು ಗುರುತಿಸಬಹುದು. ಶೈವಾರಾಧನೆ ಭಾರತದ ಪ್ರಾಚೀನ ಆರಾಧನೆಗಳಲ್ಲಿ ಒಂದಾಗಿದ್ದು, ಸಿಂಧೂ ನಾಗರಿಕತೆಯಲ್ಲಿ ಇದರ ಕುರಿತು ಕುರುಹುಗಳು ದೊರೆತಿರುವುದನ್ನು ತಿಳಿಯಬಹುದಾಗಿದೆ. ಕಾಲಾನಂತರದಲ್ಲಿ ಅದು ಭಾರತದ ಸುತ್ತಮುತ್ತ ಹರಡಿತು. ಇದಕ್ಕೆ ಕರ್ನಾಟಕವು ಹೊರತಾಗಿಲ್ಲ ಎಂದು ಹೇಳಬಹುದಾಗಿದೆ. ದಾವಣಗೆರೆ ಪರಿಸರದ ಸುತ್ತ ಶೈವ ಧರ್ಮವು ಪ್ರಬಲವಾಗಿತ್ತು ಎಂಬುದಕ್ಕೆ ಅದಕ್ಕೆ ಸಂಬಂಧಿಸಿದ ದೇವಾಲಯದ ಅವಶೇಷಗಳೇ

ಸಾಕ್ಷಿಯಾಗಿವೆ. ದಾವಣಗೆರೆ ಕಸಬಾ ಪರಿಸರದಲ್ಲಿ ಬರುವ ಶೈವ ದೇವಾಲಯಗಳ ವಿವರಣೆಯನ್ನು ಈ ಕೆಳಗಿನಂತೆ ನೀಡಲಾಗಿದೆ.

**ಈಶ್ವರ ದೇವಾಲಯ (ಅವರಗೊಳ್ಳ)**

ಸಂಖ್ಯೆ : ೧

ಹೆಸರು : ಈಶ್ವರ ದೇವಾಲಯ

ಗ್ರಾಮ : ಅವರಗೊಳ್ಳ

ಹೋಬಳಿ : ದಾವಣಗೆರೆ ಕಸಬಾ

ತಾಲ್ಲೂಕು : ದಾವಣಗೆರೆ

ಕಾಲಮಾನ : ಕ್ರಿ.ಶ. ೧೨ ನೇ ಶತಮಾನ

ದಾವಣಗೆರೆ ವಾಯುವ್ಯ ಕೊಂಡಜ್ಜಿ ಮಾರ್ಗದಲ್ಲಿ ಸುಮಾರು ಏಳು ಕಿ.ಮೀ. ಅಂತರದಲ್ಲಿ ಅವರಗೊಳ್ಳ ಗ್ರಾಮವಿದೆ. ಇಲ್ಲಿರುವ ಈಶ್ವರ ದೇವಾಲಯವು ದಾವಣಗೆರೆ ಜಿಲ್ಲೆಯ ದೇವಾಲಯಗಳಲ್ಲೇ ತುಂಬಾ ವಿಭಿನ್ನವಾದುದಾಗಿದೆ. ದೇವಾಲಯವು ಕಳಿಂಗನಾಗರ ಶೈಲಿಯಲ್ಲಿರುವುದೇ ಈ ರೀತಿ ಅಭಿಪ್ರಾಯ ಬರಲು ಕಾರಣವಾಗಿದೆ. ದೇವಾಲಯದ ದಕ್ಷಿಣದಿಕ್ಕಿನಲ್ಲಿರುವ ಶಾಸನವು ಮಾಯಿದೇವನು ಅವರಗೊಳ್ಳದ ಕನ್ನೇಶ್ವರ ದೇವರ ಸನ್ನಿದಿಯಲ್ಲಿ...... ಮುಂದಿನ ಅಕ್ಷರಗಳು ಸಂಪೂರ್ಣವಾಗಿ ನಾಶವಾಗಿರುವುದರಿಂದ ಹೆಚ್ಚಿನ ಅಂಶಗಳು ತಿಳಿದುಬರುವುದಿಲ್ಲ. ಆದರೂ ಶಾಸನದಲ್ಲಿ ಅವರಗೊಳ್ಳ ಗ್ರಾಮವನ್ನು ಹಾಗೂ ಕನ್ನೇಶ್ವರ ದೇವಾಲಯವನ್ನು ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ಗಮನಿಸಿದರೆ ಈ ದೇವಾಲಯದ ಪ್ರಾಮುಖ್ಯತೆ ತಿಳಿಯುತ್ತದೆ.[೮] ಹಾಗೆಯೇ ಇದೇ ಗ್ರಾಮದ ವೀರಭದ್ರ ದೇವಾಲಯದ ಮುಂಭಾಗದಲ್ಲಿರುವ ಮತ್ತೊಂದು ಶಾಸನವು ಕ್ರಿ.ಶ. ೧೨೭೯ರಲ್ಲಿ ಸೇವುಣ ಮಹಾದೇವ ಕೂಚರಸನು ಉಚ್ಚಂಗಿ, ಬೇತೂರು ಪ್ರದೇಶಗಳನ್ನು ಆಳುತ್ತಿದ್ದ, ಎಂದೂ ಈತನ ಮಗ ಕೂಚಚಮೂಪತಿಯು ಈ ದೇವಾಲಯಕ್ಕೆ ದತ್ತಿ ಬಿಟ್ಟ ವಿವರಗಳನ್ನು ನೀಡುತ್ತದೆ. ಈ ದೇವಾಲಯದ ಅಭಿವೃದ್ಧಿ ಮತ್ತು ಮಹತ್ವವನ್ನು ತಿಳಿಸುವ ಶಾಸನಗಳು ದೊರೆತಯತ್ತವೆಯಾದರೂ ಇದರ ಉಗಮದ ಬಗ್ಗೆ ನಿಖರವಾದ ಮಾಹಿತಿಗಳು ದೊರೆಯುವುದಿಲ್ಲ. ವಾಸ್ತು ಶೈಲಿಯ ಅಂಶಗಳನ್ನು ಅಧರಿಸಿ ಹೇಳುವುದಾದರೆ ಈ ದೇವಾಲಯದ ನಿರ್ಮಾಣ ಕಾಲ ಕ್ರಿ.ಶ. ೧೧-೧೨ನೇ ಶತಮಾನವಾಗಿದೆ.

ಗ್ರಾಮದ ಮಧ್ಯದಲ್ಲಿರುವ ಈ ದೇವಾಲಯ ಪಶ್ಚಿಮಾಭಿಮುಖವಾಗಿದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ತೆರೆದ ಮುಖಮಂಟಪಗಳನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದ ಮಧ್ಯದಲ್ಲಿ ಸುಮಾರು ಮೂರುವರೆ ಅಡಿ ಎತ್ತರದ ಶಿವಲಿಂಗವಿದೆ. ದಾವಣಗೆರೆ ಜಿಲ್ಲೆಯಲ್ಲಿ

ದೊರೆತ್ತಿರುವ ಲಿಂಗಗಳಲ್ಲಿ ಬಹುಶಃ ಇದು ಎತ್ತರವಾದುದಾಗಿದೆ. ಗರ್ಭಗೃಹದ ವಿತಾನದಲ್ಲಿ ಮುಗುಚಿದ ಕಮಲದ ಅಲಂಕರಣವಿದೆ. ಗರ್ಭಗೃಹದ ಪ್ರದೇಶದ್ವಾರವು ಸರಳವಾಗಿದೆ. ಗರ್ಭಗೃಹ ಮತ್ತು ಅಂತರಾಳದ ಮಧ್ಯದಲ್ಲಿ ಕುಳಿತ ನಂದಿಯಶಿಲ್ಪವಿದೆ. ಇದಕ್ಕೆ ಹೊಂದಿಕೊಂಡಂತೆ ಅಷ್ಟೇ ವಿಸ್ತೀರ್ಣದ ಅಂತರಾಳವಿದೆ. ಅಂತರಾಳದಲ್ಲಿ ವೀರಭದ್ರ, ಗಣೇಶನ ಮೂರ್ತಿಶಿಲ್ಪಗಳನ್ನು ಕಾಣಬಹುದು. ಇದರ ಪ್ರದೇಶದ್ವಾರವೂ ಸಹ ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಅಂತರಾಳದ ಮುಂಭಾಗದಲ್ಲಿ ನಂತರ ಕಾಲದ ತೆರೆದ ಮುಖಮಂಟಪವಿದೆ. ಈ ಭಾಗದಲ್ಲಿ ಎಂಟು ಕಂಬಗಳು ಹಾಗೂ ಹನ್ನೆರಡು ಅರೆಕಂಬಗಳನ್ನು ಕಾಣಬಹುದು.[೯] ಈ ಕಂಬಗಳು ಚೌಕ ಮತ್ತು ಅಷ್ಟಕೋನಾಕಾರದಲ್ಲಿ ಸರಳವಾಗಿವೆ. ಕೆಲ ಕಂಬಗಳ ಬೋಧಿಗೆಗಳ ಮೇಲೆ ಪುಷ್ಪ ಅಲಂಕರಣ ಕಂಡುಬರುತ್ತದೆ.

ಏರುವಿನ್ಯಾಸದಲ್ಲಿ ದೇವಾಲಯವು ಎತ್ತರವಾದ ಅಧಿಷ್ಠಾನ, ಭಿತ್ತಿ, ಕಪೋತ, ಹಾಗೂ ಶಿಖರವನ್ನು ಒಳಗೊಂಡಿದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಪದ್ಮ, ತ್ರಿಪಟ್ಟಕುಮುದ, ಕಪೋತ, ದಂತಪಟ್ಟಿಕ ಮತ್ತು ಪ್ರತಿಗಳನ್ನು ಹೊಂದಿದೆ. ದಂತಪಟ್ಟಿಕೆಯಲ್ಲಿಯ ಕೆಲವು ಉಬ್ಬುಶಿಲ್ಪಗಳು ಭಗ್ನಗೊಂಡಿವೆ. ದೇವಾಲಯದ ಭಿತ್ತಿಯು ಸರಳವಾಗಿದ್ದು, ಯಾವುದೇ ರೀತಿಯ ಅಲಂಕಾರಿಕ ಅಂಶಗಳು ಕಂಡುಬರುವುದಿಲ್ಲ. ಭಿತ್ತಿಯಲ್ಲಿ ಸರಳವಾದ ಹಿಂಬಣಿ ಮುಂಬಣಿಗಳಿವೆ. ಭಿತ್ತಿಯಲ್ಲಿ ಮಧ್ಯಪಟ್ಟಿಕಾವಿದೆ. ಗರ್ಭಗೃಹ ಭಾಗದ ಭಿತ್ತಯ ಮೂರೂ ಪಾರ್ಶ್ವಗಳಲ್ಲಿ ದೇವಕೋಷ್ಟಗಳಿವೆಯಾದರೂ ಅದರಲ್ಲಿ ಯಾವುದೇ ರೀತಿಯ ಮೂರ್ತಿಗಳು ಕಂಡುಬರುವುದಿಲ್ಲ. ಪ್ರಸ್ತರದಲ್ಲಿನ ಕಪೋತವು ಸ್ವಲ್ಪ ಮುಂದೆ ಚಾಚಿದಂತೆ ಕಂಡುಬರುತ್ತದೆ. ಕಪೋತದ ಮೇಲೆ ಎಂಟು ಹಂತಗಳ ಕಳಿಂಗನಾಗರ ಶಿಖರವಿದೆ. ಈ ರೀತಿಯ ಶಿಖರವನ್ನು ಪ್ರಸ್ತುತ ಅಧ್ಯಯನ ಪ್ರದೇಶದ ಶಾಂತಿಸಾಗರದ ಸಿದ್ದೇಶ್ವರ, ಅಶೋಕ ಸಿದ್ಧಾಪುರದ ಅಕ್ಕ-ತಂಗಿ, ನೀರ್ಗುಂದದ ಮಲ್ಲೇಶ್ವರ ದೇವಾಲಯಗಳಲ್ಲಿ ಕಾಣುತ್ತೇವೆ. ಶಿಖರದ ಮೇಲಿನ ಸ್ತೂಪಿಯನ್ನು ಇತ್ತೀಚೆಗೆ ನಿರ್ಮಿಸಲಾಗಿದೆ.

**ಈಶ್ವರ ದೇವಾಲಯ (ಆನೆಕೊಂಡ)**

| | | |
|---|---|---|
| ಸಂಖ್ಯೆ | : | ೨ |
| ಹೆಸರು | : | ಈಶ್ವರ ದೇವಾಲಯ |
| ಗ್ರಾಮ | : | ಆನೆಕೊಂಡ |
| ಸ್ಥಳ | : | ಗ್ರಾಮದ ಮಧ್ಯ ಭಾಗದಲ್ಲಿದೆ |
| ಅಭಿಮುಖ | : | ಪೂರ್ವಾಭಿಮುಖ |
| ಶಿಖರದ ಶೈಲಿ | : | ಶಿಖರವಿಲ್ಲ |
| ಬಳಸಿದ ಶಿಲೆ | : | ಬಳಪದ ಕಲ್ಲು |

ಕಾಲಮಾನ : ಕ್ರಿಶ. ೧೧-೧೨ನೇ ಶತಮಾನ

ದಾವಣಗೆರೆಗೆ ಹತ್ತಿರವಿರುವ ಆನೆಕೊಂಡ ಪ್ರಾಚೀನ ಕಾಲದಲ್ಲಿ ಸಾಕಷ್ಟು ಅಭಿವೃದ್ಧಿಹೊಂದಿದ ಪಟ್ಟಣವಾಗಿತ್ತೆಂದು ಇಲ್ಲಿ ದೊರೆಯುವ ಶಾಸನಾಧಾರದಿಂದ ಹೇಳಬಹುದುದಾಗಿದೆ. ಆನೆಕೊಂಡದಲ್ಲಿ ಗಂಗ, ಉಚ್ಚಂಗಿ ಪಾಂಡ್ಯರು ಹಾಗೂ ಹೊಯ್ಸಳರ ಕಾಲದ ಹಲವಾರು ಶಾಸನಗಳು ದೊರೆತಿವೆ. ಪ್ರಸ್ತುತ ಗ್ರಾಮದ ಮಧ್ಯಭಾಗದಲ್ಲಿರುವ ಈಶ್ವರ ದೇವಾಲಯ ಬಳಪದ ಕಲ್ಲಿನಿಂದ ನಿರ್ಮಾಣವಾಗಿದೆ. ಕ್ರಿಶ. ೧೧ನೇ ಶತಮಾನದ ಕೊನೆಭಾಗದಲ್ಲಿ ಕ್ರಿಶ. ೧೩ನೇ ಶತಮಾನದ ಮಧ್ಯಭಾಗದವರೆಗೂ ಈ ದೇವಾಲಯ ಜೀರ್ಣೋದ್ಧಾರಗೊಂಡಿರುವುದನ್ನು ಶಾಸನಗಳಿಂದ ತಿಳಿಯಬಹುದುದಾಗಿದೆ.

ಪೂರ್ವಾಭಿಮುಖವಾಗಿರುವ ಈ ದೇವಾಲಯ ತ್ರಿಕೂಟ ಶೈಲಿಯಲ್ಲಿದೆ. ತಳವಿನ್ಯಾಸದಲ್ಲಿ ಮೂರು ಗರ್ಭಗೃಹ, ಅಂತರಾಳ, ನವಂರಗ, ಹಾಗೂ ಮುಂಭಾಗದಲ್ಲಿ ನಂದಿಮಂಟಪವನ್ನು ಹೊಂದಿದೆ. ಹಾಗೆಯೇ ದೇವಾಲಯದ ಮುಂಭಾಗದಲ್ಲಿ ನಂದಿಮಂಟಪವನ್ನು ಕಾಣಬಹುದು. ಮುಖ್ಯ ಗರ್ಭಗೃಹವು ಚೌಕಾಕಾರವಾಗಿದ್ದು, ಮಧ್ಯದಲ್ಲಿ ಶಿವಲಿಂಗವಿದೆ. ಪ್ರವೇಶದ್ವಾರವು ಸರಳವಾಗಿದ್ದು, ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಇದಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಅಷ್ಟೇ ವಿಸ್ತೀರ್ಣದ ಅಂತರಾಳವಿದೆ. ಇಲ್ಲಿಯೂ ಸಹ ಒಂದು ಶಿವಲಿಂಗವನ್ನು ಕಾಣಬಹುದು. ಬಹುಶಃ ಇದನ್ನು ನಂತರ ಪ್ರತಿಷ್ಠಾಪಿಸಿರುವ ಸಾಧ್ಯತೆಯಿದೆ. ಇಲ್ಲಿಯ ವಿತಾನದಲ್ಲಿಯೂ ಸಹ ಪದ್ಮದ ಅಲಂಕರಣವಿದೆ. ಅಂತರಾಳದ ಪ್ರವೇಶದ್ವಾರವು ರತ್ನ, ವಿದ್ಯಾಧರ, ಸ್ತಂಭ, ವಲ್ಲಿ ಶಾಖೆಗಳಿಂದ ಅಲಂಕೃತಗೊಂಡಿದೆ.[೧೦]

ನವರಂಗದ ನಾಲ್ಕು ಕಂಬಗಳು ಸುಂದರವಾಗಿದೆ. ಇವುಗಳಲ್ಲಿ ಕೆಳಭಾಗದಲ್ಲಿ ಪೀಠ-ಚೌಕಾಕಾರದ ಹಲವಾರು ಬಳೆಗಳಿಂದ ಕೂಡಿದ ದಿಂಡು, ಚಪ್ಪಟೆ ಮತ್ತು ಚೂಪದ ಬಳೆಗಳು, ಘಂಟಾಕೃತಿ, ಕುಂಭಾಕೃತಿ, ಚೂಪಾದ ಕುಶನ್ ಬೋಧಿಗೆಗಳಿಂದ ಕೂಡಿವೆ. ಇಲ್ಲಿ ಮತ್ತೊಂದು ರೀತಿಯ ಕಂಬಗಳಿದ್ದು, ಅಷ್ಟಮುಖಗಳ ಬಿಡಿಬಿಡಿಯಾದ ದಿಂಡುಗಳನ್ನು ಹೊಂದಿರುವ ವೃತ್ತಾಕಾರದ ಕಂಬಗಳು ಇವೆ. ಇವುಗಳಲ್ಲಿಯೂ ಸಹ ಘಂಟಾ ಮತ್ತು ಕುಂಬದ ಬಾಹ್ಯ ವಿನ್ಯಾಸವನ್ನು ಕಾಣುತ್ತೇವೆ. ಕಂಬದ ದಿಂಡುಗಳಲ್ಲಿ ಅಷ್ಟ ಮುಖಗಳು, ಘಂಟೆಯ ಭಾಗದಲ್ಲಿ ಮಣಿಸರಗಳ ಅಲಂಕರಣೆಯನ್ನು ಕಂಡು ಬರುತ್ತದೆ. ಕಂಬಗಳ ಕೆಳಭಾಗದ ಚೌಕಾಕಾರದ ಪಟ್ಟಿಕೆಗಳನ್ನು ತೋರಣಗಳ ಮಧ್ಯ ಭೈರವ, ಮೋಹಿನಿ, ಸರಸ್ವತಿ, ಕಾಳಿ, ಬ್ರಹ್ಮ, ರತಿಮನ್ಮಥ, ವಿಷ್ಣು, ಮಹಿಷಮರ್ಧಿನಿ, ನರಸಿಂಹ ವಿಗ್ರಹಗಳಿವೆ. ನವರಂಗದ ಮಧ್ಯದ ಭುವನೇಶ್ವರಿಯು ಅತ್ಯಂತ ಆಕರ್ಷಕವಾಗಿದೆ. ಇದು ಚೌಕಾಕಾರವಾಗಿದ್ದು ಒಂಭತ್ತು ಚೌಕಗಳಿವೆ. ಮಧ್ಯದ ಭಾಗದಲ್ಲಿ ಗಜಸಂಹಾರ ಶಿವ ಇಕ್ಕೆಲಗಳಲ್ಲಿ ಬ್ರಹ್ಮ ಮತ್ತು ವಿಷ್ಣುಗಳಿರುವರು. ಸುತ್ತಲೂ ಅಷ್ಟದಿಕ್ಪಾಲಕರಿರುವುದನ್ನು ಕಾಣುತ್ತೇವೆ. ಅವರು ಉತ್ತರದಿಂದ ಕ್ರಮವಾಗಿ ಕುಬೇರ, ಈಶಾನ, ಇಂದ್ರ, ಅಗ್ನಿ, ಯಮ, ನಿಋತಿ,

ವರುಣ, ಹಾಗೂ ವಾಯು. ಇದರ ಕೆಳಗಿನ ಪಟ್ಟಿಕೆಗಳಲ್ಲಿ ದ್ವಾದಶಾದಿತ್ಯರು, ಏಕದಶರುದ್ರರು, ಯೋಗನರಸಿಂಹ, ಮೋಹಿನಿ, ನಂದಿಕೇಶ, ರಾಮ, ಲಕ್ಷ್ಮಣ, ಹನುಮಂತನ ಶಿಲ್ಪಗಳನ್ನು ಚಿಕ್ಕದಾಗಿ ಕೆತ್ತಲಾಗಿದೆ. ನವರಂಗದ ನೈರುತ್ಯ ಮತ್ತು ವಾಯುವ್ಯ ಭಾಗದಲ್ಲಿರುವ ದೇವಕೋಷ್ಟಗಳಲ್ಲಿ ಸರಸ್ವತಿ ಮತ್ತು ಮಹಿಷಮರ್ಧಿನಿ ಶಿಲ್ಪಗಳಿವೆ.[೧೧]

ನವರಂಗದ ಮುಂಭಾಗದಲ್ಲಿ ಮುಖಮಂಟಪವಿದೆ. ದಕ್ಷಿಣ ಭಾಗದ ಪಟ್ಟಿಕೆಗಳಲ್ಲಿ ಜೋಡಿ ಅರೆಕಂಬದಳ ನಡುವೆ ನೃತ್ಯಗಾರರು, ಗಣಪತಿ, ಋಷಿಗಳು, ನರ್ತನ ಭಂಗಿಯಲ್ಲಿರುವ ಸ್ತ್ರೀಯರು, ಹಾಗೂ ವಿದ್ಯಾಧರರ ಶಿಲ್ಪಗಳಿವೆ. ಉತ್ತರ ಭಾಗದ ಪಟ್ಟಿಕೆಯಲ್ಲಿ ರತಿಮನ್ಮಥ, ಬೇತಾಳ, ಲಜ್ಜಾಗೌರಿ ಮತ್ತು ಬೇಟೆಗಾರರ ಶಿಲ್ಪಗಳನ್ನು ಕಾಣಬಹುದು. ಬಾಹ್ಯ ದೃಷ್ಠಿಯಿಂದ ಗಮನಿಸಿದರೆ ಹರಿಹರದ ಹರಿಹರೇಶ್ವರ ದೇವಾಲಯದ ಸಭಾಮಂಟಪ ನೆನಪಿಗೆ ಬರುತ್ತದೆ. ಏರುವಿನ್ಯಾಸದಲ್ಲಿ ದೇವಾಲಯವು ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಅಧಿಷ್ಠಾನದಲ್ಲಿ ಜಗತಿ, ಉಪಾನ, ಪದ್ಮ, ಚೂಪುಕುಮುದ, ಕಂಠ, ದಂತಪಂಕ್ತಿಗಳಿವೆ. ಭಿತ್ತಿಭಾಗವು ಅಲ್ಲಲ್ಲಿ ಜೀರ್ಣೋದ್ಧಾರಗೊಂಡಿದೆ. ಮೂಲ ಭಿತ್ತಿ ಭಾಗದಲ್ಲಿ ಅರೆಕ'ಂಬಗಳನ್ನು ಹಾಗೂ ಕೋಷ್ಟಪಂಜರಗಳನ್ನು ಅವುಗಳ ಮೇಲೆ ಶಿಖರದ ಮಾದರಿಗಳನ್ನು ಕೆತ್ತಲಾಗಿದೆ. ದೇವಾಲಯದ ಪ್ರತೀ ಹೊರ ಮತ್ತು ಒಳಸರಿತದಲ್ಲಿಯೂ ಕರ್ಣಕುಂಭಗಳು ರಚನೆಗೊಂಡಿವೆ. ಈ ಭಿತ್ತಿ ಭಾಗವು ನಂದಿತಾವರೆಯ ಈಶ್ವರ ದೇವಾಲಯದಂತಿದ್ದರೂ ಸಹ ಅಲ್ಲಿರುವ ಹಾಗೆ ಇಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಭಿತ್ತಿಯ ಮೇಲಿನ ಪ್ರಸ್ತರ ಭಾಗದಲ್ಲಿ ಸರಳವಾದ ಕಪೋತವಿದೆ. ಕಪೋತದಲ್ಲಿ ಕೂಡು ಅಲಂಕರಣವಿದೆ. ಮೇಲಿನ ಭಾಗವು ನವೀಕೃತಗೊಂಡಿದೆ.

ದೇವಾಲಯದ ಮುಂಭಾಗದಲ್ಲಿ ಪ್ರತ್ಯೇಕವಾದ ನಂದಿ ಮಂಟಪವಿದೆ. ಮಂಟಪದ ಮಧ್ಯದಲ್ಲಿ ನಂದಿಯನ್ನು ಕಾಣಬಹುದಾಗಿದೆ. ಭುವನೇಶ್ವರಿಯಲ್ಲಿ ಅರಳಿದ ಪದ್ಮದ ಅಲಂಕರಣವಿದೆ. ಇದರ ಹಿಂಭಾಗದಲ್ಲಿ ಮತ್ತೊಂದು ಚಿಕ್ಕ ಗುಡಿಯಿದೆ. ಅದರಲ್ಲಿ ಚನ್ನಕೇಶವ ಶಿಲ್ಪವಿದೆ. ದೇವಾಲಯದ ವಾಸ್ತುವಿನ್ಯಾಸವು ಹೆಚ್ಚಾಗಿ ಚಾಲುಕ್ಯ ಶೈಲಿಯಲ್ಲಿದೆ. ಆದರೆ ಇಲ್ಲಿರುವ ಶಾಸನಗಳು ಅದಕ್ಕಿಂತಲೂ ಪೂರ್ವ ಕಾಲಕ್ಕೆ ಸೇರುವುದರಿಂದ ಬಹುಶಃ ದೇವಾಲಯವು ಉಚ್ಚಂಗಿ ಪಾಂಡ್ಯರು ಹಾಗೂ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರಬಹುದು.

**ಕಲ್ಲೇಶ್ವರ ದೇವಾಲಯ (ಎಲೆ ಬೇತೂರು)**

ಸಂಖ್ಯೆ : ೩

ಹೆಸರು : ಕಲ್ಲೇಶ್ವರ ದೇವಾಲಯ

ಗ್ರಾಮ : ಎಲೆ ಬೇತೂರು

ಸ್ಥಳ : ಗ್ರಾಮದ ಉತ್ತರ ದಿಕ್ಕಿಗೆ

ಅಭಿಮುಖ : ಪೂರ್ವಾಭಿಮುಖ

ಶಿಖರದ ಶೈಲಿ : ಮೂಲ ಶಿಖರ ಉಳಿದಿಲ್ಲ

ಬಳಸಿದ ಶಿಲೆ : ಬಳಪದ ಕಲ್ಲು

ಕಾಲಮಾನ : ಕ್ರಿ.ಶ. ೧೧-೧೨ನೇ ಶತಮಾನ

ದಾವಣಗೆರೆ ಜಿಲ್ಲೆಯ ಪ್ರಾಚೀನ ಇತಿಹಾಸವನ್ನು ತೆರೆದಿಡುವ ಸ್ಥಳಗಳಲ್ಲಿ ಎಲೇ ಬೇತೂರು ಗ್ರಾಮವು ಒಂದಾಗಿದೆ. ಗರ್ಭಗುಡಿ ತೆರೆದ ಅಂತರಾಳ, ನವರಂಗ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ಹೊರಭಾಗದ ಅಧಿಷ್ಠಾನವು ಉಪಾನ, ಪದ್ಮ, ಕಪೋತಗಳಿಂದ ಹೊಡಿದೆ. ಗರ್ಭಗುಡಿ ಆಂತರಾಳದ ಭಿತ್ತಿಯಲ್ಲಿ ಅರೆಕಂಬಗಳ ವಿನ್ಯಾಸವನ್ನು ಮಾಡಲಾಗಿದೆ. ನವರಂಗದ ಬಾಹ್ಯ ಭಿತ್ತಿಯ ಭಾಗದಲ್ಲಿ ಯಾವುದೇ ರೀತಿಯ ಶಿಲ್ಪ ಅಥವಾ ಇನ್ನು ಯಾವುದೇ ಅಲಂಕರಣೆಗಳಿಲ್ಲ. ಗರ್ಭಗುಡಿ, ಆಂತರಾಳ ಭಾಗದಲ್ಲಿ ಮಾತ್ರ ಪ್ರಸ್ತರದಲ್ಲಿನ ಕಪೋತ ಭಾಗವು ಕಂಡುಬರುತ್ತದೆ. ಅದು ಸ್ವಲ್ಪ ಮುಂದೆ ಬಾಗಿದ್ದು, ಹೊರ ಚಾಚಿದ ರೀತಿಯಲ್ಲಿದೆ.[೧೨] ಗರ್ಭಗುಡಿ ಮೇಲೆ ಇತ್ತೀಚೆಗೆ ನಿರ್ಮಿಸಿದ ಶಿಖರೋಪಾದಿಯ ಮೇಲ್ಕಟ್ಟಡವಿದೆ. ಚೌಕಾಕಾರದ ಗರ್ಭಗುಡಿಯಲ್ಲಿ ಲಿಂಗವಿದೆ. ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗುಡಿ ದ್ವಾರವು ಸರಳವಾಗಿದೆ. ತೆರೆದ ಅಂತರಾಳವಿದ್ದು, ಅದು ಆಯುತಾಕಾರವಾಗಿದೆ. ಇದರ ದ್ವಾರವು ಸಾಧಾರಣವಾಗಿದೆ. ಅಂತರಾಳದ ಮುಂದಿನ ನವರಂಗದಲ್ಲಿ ನಾಲ್ಕು ಕಣ್ಮನ ಸೆಳೆಯುವ ಕಂಬಗಳಿವೆ. ಇವು ಆಯತ ಇಲ್ಲವೇ ಅಷ್ಟಕೋನ ಹಾಗೂ ಚೌಕಾಕಾರದಲ್ಲಿವೆ. ಈ ಕಂಬಗಳು ಪುಷ್ಪ ಬೋಧಿಗೆಗಳನ್ನು ಹೊಂದಿವೆ. ಅಷ್ಟದಿಕ್ಪಾಲಕರಾದ ಕುಬೇರ, ಈಶಾನ್ಯ, ಇಂದ್ರ, ಅಗ್ನಿ, ಯಮ, ನಿಋುತಿ, ವರುಣ, ವಾಯುವಿನ ಪತ್ನಿ ಹಾಗೂ ವಾಹನ ಸಮೇತವಾಗಿ ನವರಂಗದ ಮುಚ್ಚಿಕೆಯಲ್ಲಿ ತುಂಬಾ ಸುಂದರವಾಗಿ ಕೆತ್ತಲಾಗಿದೆ. ಈ ದಿಕ್ಪಾಲಕರ ಮಧ್ಯದಲ್ಲಿ ನಾಟ್ಯಶಿವನನ್ನು ಸಹ ಬಿಡಿಸಲಾಗಿದೆ.[೧೩] ನವರಂಗದ ಅಲ್ಲಲ್ಲಿ ಸರಸ್ವತಿ ಕಾರ್ತಿಕೇಯ ವಿಷ್ಣು, ನಾಗ, ನಾಗಿಣಿ ಮೂರ್ತಿಗಳನ್ನು ಹೊರಗಿನಿಂದ ತಂದು ಇಡಲಾಗಿದೆ. ಇದರ ದ್ವಾರ ಭಾಗದಲ್ಲಿ ಗಂಗೆ-ಯಮುನೆಯರು ಹಾಗೂ ಶೈವದ್ವಾರಪಾಲಕ ಹಾಗೂ ಚಾಮರಧಾರಣಿ ಶಿಲ್ಪಗಳಿವೆ. ದ್ವಾರವು ರತ್ನ, ಲತಾ, ಸ್ತಂಭ, ಪುಷ್ಪ ಶಾಖಾಗಳಿಂದ ಕೊಡಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.

ತೆರೆದ ಮುಖಮಂಟಪದಲ್ಲಿ ಅಯತಾ, ಅಷ್ಟಕೋನಾ, ಚೌಕಾಕಾರದ ಹದಿನಾರು ಕಂಬಗಳಿದ್ದು, ಇವುಗಳ ಫಲಕದ ಭಾಗವು ಪುಷ್ಪಗಳ ಅಲಂಕರಣೆಯಿಂದ ಕೊಡಿದೆ. ಉಳಿದಂತೆ ಯಾವ ಶಿಲ್ಪಗಳು ಈ ಕಂಬಗಳಿಲ್ಲಿಲ್ಲ. ಇಲ್ಲಿನ ಬೋದಿಗೆಗಳಲ್ಲಿ ಪುಷ್ಪಗಳ ಅಲಂಕರಣೆ ಇದೆ. ಈ ದೇವಾಲಯದಲ್ಲಿನ ಕಂಬಗಳ ವಿನ್ಯಾಸದಲ್ಲಿ ಹಾಗೂ ಅಲಂಕರಣೆ ಇವುಗಳು ಪ್ರಾದೇಶಿಕ ವೈಭಿನ್ನತೆಯನ್ನು ಎತ್ತಿ ತೋರಿಸುತ್ತದೆ.[೧೪] ದೇವಾಲಯದ ಉಳಿದ ವಾಸ್ತು ಲಕ್ಷಣಗಳ ಅಧಾರದ

ಮೇಲೆ ಉಚ್ಚಂಗಿ ಪಾಂಡ್ಯರ ಕಾಲಾವಧಿಯಲ್ಲಿ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ಈ ದೇವಾಲಯ ನಿರ್ಮಿತವಾಗಿದೆ ಎಂದು ಹೇಳಲಾಗುತ್ತದೆ.

**ಸೋಮೇಶ್ವರ ದೇವಾಲಯ (ಹಳೇ ಕುಂದುವಾಡ)**

| | | |
|---|---|---|
| ಸಂಖ್ಯೆ | : | ೪ |
| ಹೆಸರು | : | ಸೋಮೇಶ್ವರ ದೇವಾಲಯ |
| ಗ್ರಾಮ | : | ಹಳೇ ಕುಂದುವಾಡ |
| ಸ್ಥಳ | : | ಊರಿನ ಕೊನೆಯ ಭಾಗ |
| ಅಭಿಮುಖ | : | ಪೂರ್ವಭಿಮುಖ |
| ಬಳಸಿದ ಶೈಲಿ | : | ತ್ರಿಕುಟಾಚಲ |
| ಬಳಸಿದ ಶಿಲೆ | : | ಬಳಪದ ಕಲ್ಲು |
| ಕಾಲಮಾನ | : | ಸು. ೧೨ನೇ ಶತಮಾನ |

ದಾವಣಗೆರೆ ಕಸಬಾ ಪರಿಸರದಲ್ಲಿ ಕಂಡು ಬರುವ ಹಳೇ ಕುಂದುವಾಡ ಗ್ರಾಮದಲ್ಲಿ ಶೈವ ದೇವಾಲಯ ಕಂಡು ಬರುತ್ತದೆ. ಈ ದೇವಾಲಯವು ಚಾಲುಕ್ಯ, ಹೊಯ್ಸಳರ ಕಾಲ ಅವಧಿಯಲ್ಲಿ ನಿರ್ಮಾಣವಾಗಿದೆ. ಹೊಯ್ಸಳರ ರಾಜ ವೀರಬಲ್ಲಾಳನ ಆಳ್ವಿಕೆಯಲ್ಲಿ ಈ ದೇವಾಲಯವು ನಿರ್ಮಾಣವಾಗಿ ಕ್ರಮೇಣ ಜೀರ್ಣೋದ್ಧಾರಗೊಂಡಿದೆ. ಈ ದೇವಾಲಯದಲ್ಲಿ ಸುಂದರವಾದ ಕಲಾತ್ಮಕ ಮತ್ತು ಸಾಕಷ್ಟು ದೊಡ್ಡದಾದ ದೇವಾಲಯವಾಗಿದೆ. ಈ ದೇವಾಲಯವು ಮುಂಖಮಂಟಪ, ನವರಂಗಕ್ಕೆ ಹೊಂದಿದಂತೆ ಸುಖನಾಸಿ, ಗರ್ಭಗುಡಿ ಇದ್ದು, ಇದರ ಮಧ್ಯ ಇರುವ ಗರ್ಭಗುಡಿಯಲ್ಲಿ ಅತ್ಯಂತ ಸುಂದರವಾದ ಶಿವಲಿಂಗವನ್ನು ಹೊಂದಿದೆ.[೧೫] ಸುಮಾರು ಮೂರುವರೆ ನಾಲ್ಕು ಅಡಿ ಎತ್ತರದಲ್ಲಿ ಇದೆ. ಶಿವಲಿಂಗದ ಎದುರಿಗೆ ಒಂದೊವರೆ ಅಡಿ ಉದ್ದದ ಬಸವನ ವಿಗ್ರಹವಿದೆ. ದೇವಾಲಯದ ನವರಂಗದಲ್ಲಿ ನಾಲ್ಕು ಸುಂದರ ಕೆತ್ತನೆಯ ಕಂಬಗಳಿವೆ ಹಾಗೂ ಅಕ್ಕಪಕ್ಕ ಎರಡು ಕಂಬಗಳಿವೆ. ಆದರೆ ಈ ಗುಡಿಯಲ್ಲಿ ಎರಡು ಗರ್ಭಗುಡಿಗಳು ಮಾತ್ರ ಇದೆ. ಒಂದು ಗರ್ಭಗುಡಿಯಲ್ಲಿ ತೆಗೆದು ಗೋಡೆ ಇಡಲಾಗಿದೆ. ಒಂದು ಗರ್ಭಗುಡಿಯಲ್ಲಿ ಕಾಳಮ್ಮದೇವಿ, ನಾಗರಕಲ್ಲುಗಳಿವೆ. ಈ ಸುಂದರ ದೇವಾಲಯಕ್ಕೆ ಗೋಪುರವಿಲ್ಲ, ಒಳಗೆ ಸರಸ್ವತಿ ಮತ್ತು ಇತರೆ ಪುರಾತನ ವಿಗ್ರಹಗಳಿವೆ. ಇಷ್ಟೊಂದು ಪ್ರಾಚೀನ ದೇವಾಲಯದಲ್ಲಿ ಕಲ್ಲೇಶ್ವರ ದೇವರ ತೇರು ಉತ್ಸವ ಇತರೆ ಯಾವುದೇ ಮಂಗಳ ಕಾರ್ಯಗಳು ನಡೆಯುತ್ತಿಲ್ಲ. ಆದರೆ ಶಿವ ರಾತ್ರಿಯಲ್ಲಿ ಹಾಗೂ ಭಕ್ತರ ಕೋರಿಕೆಯ ಮೇರೆಗೆ ವಿಶೇಷ ಪೂಜೆಗಳನ್ನು ಇಂದಿನ ದಿನಗಳಲ್ಲಿ ನಡೆಸುತ್ತಿದ್ದಾರೆ.[೧೬]

## ೩.೨ ಮೂರ್ತಿಶಿಲ್ಪಗಳು

ವಾಸ್ತುಶಿಲ್ಪ (ದೇವಾಲಯ) ಗಳಷ್ಟೇ ಪ್ರಾಮುಖ್ಯತೆಯನ್ನು ಮೂರ್ತಿಶಿಲ್ಪಗಳು ಸಹ ಪಡೆದುಕೊಂಡಿದೆ. ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ಅರವತ್ನಾಲ್ಕು ಕಲೆಗಳಿಗೆಲ್ಲಾ 'ಶಿಲ್ಪ' ಎನ್ನುವ ಹೆಸರು ಅನ್ವಯವಾಗುತ್ತದೆ. ಶಿಲ್ಪ ಎಂಬ ಪದಕ್ಕೆ ಬೆರಗನ್ನುಂಟು ಮಾಡುವ ಕೈಕೆಲಸ ಎಂಬ ಅರ್ಥವಿದೆ. ಸಂಸ್ಕೃತದ ಶಿಲ್ಪವೆಂಬ ಶಬ್ಧ (ಶೀಲ ಸಮಾಧೌ) ಎನ್ನುವ ಧಾತುವಿನಿಂದ ಉತ್ಪನ್ನವಾಗಿದೆ.[೨೦] ಸಮಾಧಿ ಎಂಬ ಅರ್ಥವುಳ್ಳ ಶಿಲ್ ಧಾತುವು ತಪಸ್ಸನ್ನು ಸೂಚಿಸುತ್ತದೆ. ಅಂದರೆ ತಪಸ್ಸಿನ ಪ್ರಭಾವದಿಂದ ನಿರ್ವಹಿಸಲ್ಪಡುತ್ತಿರುವುದು. ಶಿಲ್ಪ ಎಂಬುದು ಒಂದು ಅರ್ಥ ಶಿಲ್ಪೋಪನಿಷತ್ತೆಂಬ ಗ್ರಂಥವು ಜಗತ್ತನ್ನೆಲ್ಲ ಸೃಷ್ಟಿಮಾಡಿದ ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದುದೆಲ್ಲ ಶಿಲ್ಪವೇ ಎಂದು ಹೇಳುತ್ತದೆ.[೨೧] ಸಂಸ್ಕೃತದ ಪ್ರಾಚೀನ ಗ್ರಂಥಗಳಲ್ಲಿ 'ಶಿಲ್ಪ' ಶಬ್ಧವನ್ನು 'ಕಲಾಕೌಶಲ' ಎಂಬ ಅರ್ಥದಲ್ಲಿ ಬಳಸಲಾಗಿದೆ. ಶಿಲ್ಪವೆಂದರೆ 'ಲಲಿತ ಅಥವಾ ಯಂತ್ರಕಲೆ' ಎಂದು ಅರ್ಥವಾಗುತ್ತದೆ. ಮುಂದೆ ಈ ಪದದ ವ್ಯಾಪ್ತಿ ಪರಿಮಿತಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೨೨] 'ಮೂರ್ತಿ' ಎಂಬುದಕ್ಕೆ ಪರ್ಯಾಯವಾಗಿ ಬಳಸಿರುವ ಪದಗಳು ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಎಂಬ ಪದಗಳ ಅದೊಂದು ಭೌತಿಕವಸ್ತು ಎಂಬಂತೆ ಅರ್ಥಕೊಡುತ್ತದೆ. ಮೂರ್ತಿಶಿಲ್ಪವನ್ನು ಕುರಿತು ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಮೂರ್ತಿಶಾಸ್ತ್ರ ಅಥವಾ ಪ್ರತಿಮಾಶಾಸ್ತ್ರವೆಂದು ಕರೆಯಲಾಗುತ್ತದೆ.

ಮೂರ್ತಿಶಿಲ್ಪವನ್ನು ದೇವಶಿಲ್ಪ ಮತ್ತು ಮಾನವಶಿಲ್ಪ ಎಂಬ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ, ದೇವಶಿಲ್ಪಗಳು ಎಂದರೆ ದೇವ ಸಂಬಂಧ ಇರಿಸಿಕೊಂಡಿರುವ ಶಿಲ್ಪಗಳು ಅಂದರೆ ಉಜ್ಞವೆದಿ, ಯಜ್ಞಕುಂಡ, ಯಜ್ಞಪಾತ್ರೆ, ಯಜ್ಞಶಾಲೆ, ದೇವಾಲಯ, ದೇವಮೂರ್ತಿ, ದೇವೋಪಕರಣ. ಪೂಜಾಪಾತ್ರೆ, ಸುವರ್ಣಲಂಕಾರ, ರಥ, ಆಯುಧಗಳು, ಯಜ್ಞ ಮತ್ತು ಸುವರ್ಣ, ತಾಮ್ರ, ಕಬ್ಬಿಣ, ಮರ, ಕಲ್ಲು ಎಂಬ ವಸ್ತುಗಳಲ್ಲಿ ದೇವಾಲಯಕ್ಕೆ ಯಜ್ಞ ಮತ್ತು ಪೂಜೆಗೆ ಸಂಬಂಧಿಸಿದಂತೆ ನಿರ್ಮಿಸಿರು ಶಿಲ್ಪಗಳು ಪ್ರಪಂಚದಲ್ಲಿ ಮಾನವನ ಉಪಯೋಗಾರ್ಥವಾಗಿ ಅವನ ಬದುಕನ್ನು ಸುಖಗೊಳಿಸಲು ಮತ್ತು ಅವನ ಆತ್ಮದ ಸಂಸ್ಕರಣೆಗೆ ಅವಶ್ಯಕವಾಗಿ ಪಂಚವಿಧ ಶಿಲ್ಪಗಳನ್ನು ನಡೆಸಲಾಗುತ್ತದೆ. ಇವು ಮನುಷ್ಯನ ಜೀವನವು ಸುಖಮಯವಾಗುವಂತೆ ನೆರವಾಗುತ್ತದೆ. ಇಂತಹ ಮನುಷ್ಯೋಪಯೋಗಿ ವಸ್ತು ನಿರ್ಮಾಣವು 'ಮಾನವಶಿಲ್ಪ' ಎಂದು ಕರೆಯಲ್ಪಡುತ್ತದೆ. ಹಿಗೇ ದೇವಮಾನವ ಶಿಲ್ಪಗಳು ಮನುಷ್ಯನ ಇಹಪರ ಬದುಕನ್ನು ಸುಖಮಯಾಗೊಳಿಸುತ್ತದೆ. ಶಿಲ್ಪವು ಮಾನವ ಬಹಿರಂಗ ಮತ್ತು ಅಂತರಂಗಗಳನ್ನು ಸಂಸ್ಕರಿಸುವ ಪ್ರಬಲಶಕ್ತಿಯಾಗಿದೆ.

**ಶೈವ ಮೂರ್ತಿಗಳು**

ಶಿವನನ್ನು ಪಶುಪತಿ, ಚನ್ನಮಲ್ಲಿಕಾರ್ಜುನ, ಮಹೇಶ್ವರ, ರುದ್ರ, ಕಲ್ಲೇಶ್ವರ, ಈಶ್ವರ, ಸೋಮೇಶ್ವರ, ಭೋಗೇಶ್ವರ, ಮುಕ್ಕಣ್ಣೇಶ್ವರ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಶಿವನನ್ನು ಹೆಚ್ಚಾಗಿ ಲಿಂಗವಿನ ರೂಪದಲ್ಲಿ ಪೂಜೆ ಮಾಡುತ್ತಿದ್ದು, ಮೂರ್ತಿ ರೂಪದಲ್ಲಿ ಪೂಜಿಸುವುದು ಕಡಿಮೆ ಶಿವನನ್ನು ಪೂಜಿಸುವವರನ್ನು ಶೈವ ಪಂಥಕ್ಕೆ ಸೇರಿಸಲಾಗಿದೆ. ಶಿವನ ಲೀಲಾವಳಿಗಳು ಶಿಲ್ಪ ರೂಪದಲ್ಲಿ ಭಿತ್ತಿಯ ಮೇಲೆ ಕಂಬಗಳ ಮೇಲೆ ಕೆತ್ತಲಾಗಿರುತ್ತದೆ. ದಾವಣಗೆರೆ ಪರಿಸರದಲ್ಲಿ ದೊರೆತ ಶೈವ ಮೂರ್ತಿಗಳಾಗಿ ಸಂಬಂಧಿಸಿದಂತೆ, ಶಿವಲಿಂಗದ ಹೊರತಾಗಿರುವ ಸ್ಥಾನಿಕ, ಅಸೀನ ಮೂರ್ತಿಗಳು ಇಲ್ಲಿ ಪ್ರಧಾನವಾಗಿದೆ. ಶಿವನ ಪ್ರತಿರೂಪವೆಂದು ಭಾವಿಸಲಾಗಿರುವ ಲಿಂಗ ಹಾಗೂ ಆತನ ವಾಹನದ ನಂದಿ (ವೃಷಭ) ಗಳು ಪ್ರತಿಯೊಂದು ಶೈವ ದೇವಾಲಯದಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ. ಹಾಗೆಯೇ ಉಮಾ ಮಹೇಶ್ವರ, ಶೈವ ದ್ವಾರಪಾಲಕ, ಭೈರವ, ವೀರಭದ್ರ, ಗಣೇಶ, ಸ್ಕಂದ ಮೂರ್ತಿಗಳು ಈ ಪರಿಸರದ ದೇವಾಲಯಗಳಲ್ಲಿ ಕಂಡುಬರುತ್ತಿದ್ದು, ಅವುಗಳನ್ನು ಈ ಕೆಳಗಿನ ರೀತಿಯಲ್ಲಿ ಅಧ್ಯಯನ ಮಾಡಲಾಗಿ ವಿವರಿಸಲಾಗಿದೆ.

**ಶಿವಲಿಂಗಗಳು** : ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶಿವಲಿಂಗಗಳನ್ನು ಇಂದಿಗೂ ಹೆಚ್ಚಾಗಿ ಕಂಡು ಬರುತ್ತದೆ. ಇವುಗಳು ಇಂದಿಗೂ ಪೂಜೆಗೆ ಒಳಪಟ್ಟಿವೆ, ಹಾಗೂ ಸಂರಕ್ಷಿಸಲ್ಪಟ್ಟಿವೆ. ದಾವಣಗೆರೆ ಕಸಬಾ ಪರಿಸರದಲ್ಲಿ ಇರುವ ಎಲ್ಲಾ ಗ್ರಾಮಗಳಲ್ಲಿ ದೊಡ್ಡ ಮತ್ತು ಅತಿ ಚಿಕ್ಕ ಶಿವಲಿಂಗಗಳನ್ನು ಹೊಂದಿರುವ ದೇವಾಸ್ಥಾನಗಳು ಕಂಡು ಬರುತ್ತದೆ. ಆವರಗೊಳ್ಳ ಗ್ರಾಮದ ಶಿವಲಿಂಗವು ದಾವಣಗೆರೆ ತಾಲೂಕಿನಲ್ಲಿ ದೊಡ್ಡ ಶಿವಲಿಂಗವಾಗಿದೆ. ಶಿವಲಿಂಗಗಳಲ್ಲಿ ಅರ್ಧಚಂದ್ರಾಕೃತಿಯ, ವೃತ್ತಾಕಾರದ ಹಾಗೂ ಬಾಣಾಕಾರದ ಲಿಂಗಗಳು ಈ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಮುಖ ರೂಪದ ಲಿಂಗಗಳೂ ಅಲ್ಲಲ್ಲಿ ನೋಡಬಹುದಾಗಿದೆ. ಪೀಠದಲ್ಲಿ ವೃತ್ತಾಕಾರದ, ಚೌಕಾಕಾರ, ಆಯತಾಕಾರದ ಪೀಠಗಳೂ ಈ ಭಾಗದ ಪ್ರದೇಶದಲ್ಲಿ ಕಂಡುಬರುತ್ತವೆ, ಪ್ರಸ್ತುತ ದಾವಣಗೆರೆ ಜಿಲ್ಲೆಗೆ ಸಂಬಂಧಿಸಿದಂತೆ ಶಿವಲಿಂಗಗಳಿಗೆ ಮತ್ತು ಅವುಗಳ ಪೀಠಭಾಗಗಳಿಗೆ ಬಳಪದ ಅಥವಾ ಕಪ್ಪು ಶಿಲೆಯನ್ನು ಹೆಚ್ಚಾಗಿ ಉಪಯೋಗಿಸಿದ್ದಾರೆ. ಅವರಗೊಳ್ಳದ ಈಶ್ವರ ದೇವಾಲಯದ ಲಿಂಗವು 'ನಾಲ'ವು (ಜಲಹರಿ) ಬಲಭಾಗಕ್ಕಿಂದ್ದು, ಇವುಗಳು ಬಲಹರಿ ಲಿಂಗಗಳೆಂದು ಕರೆಯಲ್ಪಡುವುದು ವಿಶೇಷವಾಗಿದೆ. ಆನೆಕೊಂಡ ಗ್ರಾಮದಲ್ಲಿ ವಿಭಿನ್ನ ಕಾಲಘಟ್ಟದಲ್ಲಿ ನಿರ್ಮಿತವಾದ ವೈವಿಧ್ಯಮಯ ಶಿವಲಿಂಗಗಳು ಕಂಡುಬರುತ್ತದೆ.

**ನಂದಿ** : ಶಿವನ ವಾಹನವೇ ನಂದಿಯಾಗಿದೆ. ಇದನ್ನು ಶಿವಲಿಂಗದ ಅಭಿಮುಖವಾಗಿ ಸ್ಥಾಪಿಸಿ ಪೂಜಿಸುತ್ತಿದ್ದಾರೆ. ಈ ರೀತಿಯಾಗಿ ಪ್ರಾಚೀನವಾದ ಶೈವ ದೇವಾಲಯಗಳಲ್ಲಿ ಮಾತ್ರವಲ್ಲದೇ ಇತ್ತೀಚೆಗೆ ನಿರ್ಮಿತವಾದ ದೇವಾಲಯಗಳಲ್ಲಿಯು ಕಾಣಬಹುದಾಗಿದೆ. ಆನೆಕೊಂಡದಲ್ಲಿ ಪ್ರತ್ಯೇಕ

ನಂದಿಗುಡಿಯನ್ನು ಎದುರಿಗೆ ಕಟ್ಟಿರುವುದನ್ನು ಕಾಣಬಹುದಾಗಿದೆ. ಲಿಂಗಕ್ಕೆ ಮುಖ ಮಾಡಿರುವ ಇಲ್ಲಿನ ನಂದಿ ಮೂರ್ತಿಗಳನ್ನು ಎರಡು ರೀತಿಯಲ್ಲಿ ಅಧ್ಯಯನ ಮಾಡಬಹುದಾಗಿದೆ.

೧. ಅಲಂಕಾರ ರಹಿತ ನಂದಿಗಳು

೨. ಅಲಂಕಾರ ಸಹಿತ ನಂದಿಗಳು

ದಾವಣಗೆರೆ ಪರಿಸರದಲ್ಲಿರುವ ಆನೆಕೊಂಡದಲ್ಲಿ ತ್ರಿಕೂಟ ಲಿಂಗೇಶ್ವರ ದೇವಾಲಯದ ನಂದಿ ಕಾಣಬಹುದು ಹಾಗೂ ನಂದಿಗಳು ಎತ್ತರದ ದೃಷ್ಠಿಯಿಂದಲೂ ಸೌಂದರ್ಯ ದೃಷ್ಠಿಯಿಂದಲೂ ಆಕರ್ಷಣೀಯವಾಗಿದೆ. ದೇವಾಲಯದ ಅಂತರಾಳದಲ್ಲಿ ಇಲ್ಲವೇ ದೇವಾಲಯದ ಆವರಣದೊಳಗೆ ನಂದಿಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ.

**ವೀರಭದ್ರ** : ಶೈವ ದೇವಾಲಯಗಳಲ್ಲಿ ಅಥವಾ ವೀರಭದ್ರನಿಗಾಗಿ ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಿರುವುದನ್ನು ಈ ಪರಿಸರದಲ್ಲಿ ಕಂಡುಬರುತ್ತದೆ. ಕೂರ್ಮ ಪುರಾಣ, ವೀರಭದ್ರ ಪುರಾಣ ಮತ್ತು ಭಾಗವತ್ ಪುರಾಣ, ವೀರಭದ್ರ ಮೂರ್ತಿಯ ಉಗಮ ಮತ್ತು ಹಿನ್ನೆಲೆಯನ್ನು ಉಲ್ಲೇಖಿಸಿದೆ, ಶ್ರೀ ತತ್ವನಿಧಿ, ವೀರಭದ್ರನ ಪ್ರತಿಮಾಲಕ್ಷಣಗಳನ್ನು ವಿವರಿಸುತ್ತದೆ. ಶಿಲ್ಪರತ್ನ, ಶಿಲ್ಪ ಸಂಗ್ರಹ ಗ್ರಂಥಗಳು ವೀರಭದ್ರ ಮೂರ್ತಿಯ ವಿವಿಧ ರೂಪಗಳನ್ನು ತಿಳಿಸುತ್ತವೆ. ಆವರಗೊಳ್ಳ ಗ್ರಾಮದ ವೀರಭದ್ರ ದೇವಾಲಯದಲ್ಲಿ ಪೀಠದ ಮೇಲೆ ಸ್ಥಾನಿಕವಾಗಿರುವ ಈ ಮೂರ್ತಿಯು ಚತುರ್ಭುಜದಲ್ಲಿದ್ದು, ಕಿರೀಟದಾರೆಯಾಗಿದೆ. ಈ ಮೂರ್ತಿಯು ಕೊರಳಹಾರ, ಕಿವಿಯೋಲೆ, ಯಜ್ಞೋಪವೀತ, ಉದರಬಂಧ, ಕೈ ಕಡಗ ಹಾಗೂ ಕೊಯೂರ ಧರಿಸಿದೆ, ಮೇಲಿನ ಹಾಗೂ ಕೆಳಗಿನ ಬಲಗೈಗಳು ತ್ರುಟಿತವಾಗಿದ್ದು, ಎಡಗೈಗಳಲ್ಲಿ ಬಿಲ್ಲು, ಖೇಟಕವನ್ನು ಹಿಡಿದಿದೆ. ಈ ಮೂರ್ತಿಯ ಹಿಂಭಾಗದಲ್ಲಿ ಕೀರ್ತಿಮುಖಯುಕ್ತ ಪ್ರಭಾವಳಿಯನ್ನು ಉತ್ತಮ ರೀತಿಯಲ್ಲಿ ಅಲಂಕರಿಸಲಾಗಿದೆ. ವೀರಭದ್ರನ ಮುಖಭಾವ, ಮಿತವಾದ ಅಲಂಕರಣೆ, ಆಯುಧಗಳನ್ನು ಹಿಡಿದ ರೀತಿ ಕಲ್ಯಾಣ ಚಾಲುಕ್ಯರ ಕಾಲದ ಮೂರ್ತಿಗಳಿಗಿಂತ ಸ್ವಲ್ಪ ಭಿನ್ನವಾಗಿದೆ.

**ಗಣಪತಿ ಮೂರ್ತಿ** : ಕರ್ನಾಟಕದ ತುಂಬೆಲ್ಲಾ ಗಣೇಶನ ಆಚರಣೆ ಹಿಂದಿನಿಂದಲೂ ನಡೆದು ಬಂದಿದ್ದಾರೆ. ಶಿವ, ಬ್ರಹ್ಮಾಂಡ, ಗಣೇಶ, ವರಹ, ಭವಿಷ್ಯ, ಸ್ಕಂದ, ಬ್ರಹ್ಮ ವೈವರ್ಥ ಪುರಾಣಗಳಲ್ಲಿ ಗಣಪತಿಯ ಉಲ್ಲೇಖದಿಂದ, ಗಣಪತಿಯು ತನ್ನ ಕೈಗಳಲ್ಲಿ ಪರುಶು, ಪಾಶ, ಮತ್ತು ಈಟಿ, ಮೋದಕ, ತ್ರಿಶೂಲ, ಶಂಕ, ಚಕ್ರ, ರತ್ನಕಲಶ, ಫಲ ಮತ್ತು ಇಕ್ಷಾಚಾಪ ಹಿಡಿದಿದ್ದು, ಜೊತೆಗೆ ಕೆಳಗಿನ ಕೈಗಳು ಅಭಯ, ವರದ, ಮುದ್ರೆಗಳಲ್ಲಿರುತ್ತವೆ.[೨೩] ದಾವಣಗೆರೆ ಪ್ರದೇಶದಲ್ಲಿ ಪ್ರಾಚೀನ ಮತ್ತು ಮಧ್ಯಕಾಲಕ್ಕೆ ಸೇರಿದ ಹಲವಾರು ಗಣಪತಿ ಮೂರ್ತಿಗಳು ವಿವಿಧೆಡೆ ದೊರೆಯುತ್ತಿದ್ದು, ಇವುಗಳಲ್ಲಿ ದ್ವಿಭುಜ ಮತ್ತು ಚತುರ್ಭುಜ, ಗಣಪತಿ ವಿಗ್ರಹಗಳೇ ಹೆಚ್ಚಾಗಿ ಕಂಡುಬರುತ್ತದೆ.

**ಶೈವ ದ್ವಾರಪಾಲಕ ಮೂರ್ತಿ :** ದೇವಾಲಯದ ಪ್ರವೇಶದ್ವಾರದ ಅಥವಾ ಅಂತರಾಳದ ಎಡಬಲದಲ್ಲಿ ದ್ವಾರಪಾಕರಿರುವುದು ಸಾಮಾನ್ಯ. ಈ ದ್ವಾರಪಾಲಕರನ್ನು ಆಯಾ ಮುಖದೇವರ ಸೇವಕರೆಂದು ಕರೆಯಲಾಗುತ್ತದೆ. ದಾವಣಗೆರೆ ಪ್ರದೇಶದಲ್ಲಿ ಶೈವ ದೇವಾಲಯಗಳ ದ್ವಾರದ ಎಡಬಲದಲ್ಲಿ ಅಭಯ, ವರದ ಹಸ್ತರಾಗಿ, ತ್ರಿಶೂಲ, ಡಮರುಗ ಹಿಡಿದು ನಿಂತಿರುವ ಧ್ವಿಭುಜ ಇಲ್ಲವೇ ಚತುರ್ಭಜವುಳ್ಳಶೈವ ದ್ವಾರಪಾಲಕ ಶಿಲ್ಪಗಳು ಕಾಣಬರುತ್ತವೆ.

**ವೈಷ್ಣವ ಮೂರ್ತಿಗಳು**

ಶೈವ ಧರ್ಮದಂತೆ ವೈಷ್ಣವ ಧರ್ಮವು ಕೂಡಾ ಪ್ರಾಚೀನ ಕಾಲದಿಂದಲೂ ಬೆಳವಣಿಗೆ ಹೋದುತ್ತ ಬಂದಿದೆ. ಇಲ್ಲಿ ವಿಷ್ಣುವು ಪ್ರಧಾನವಾಗಿದ್ದು, ಇಪ್ಪತ್ತು ನಾಲ್ಕು ರೂಪ ಮತ್ತು ಹತ್ತು ಅವತಾರಗಳಲ್ಲಿ ಪೂಜಿಸಲಾಗುತ್ತದೆ. ಬೃಹತ್ ಸಂಹಿತೆ ಮತ್ತು ಪುರಾಣ, ವಿಹಜೇಂದ್ರ ಸಂಹಿತೆ, ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಮೊದಲಾದ ಗ್ರಂಥಗಳು ಈ ಮೂರ್ತಿ ಆರಾಧನೆ ಮತ್ತು ಹಿನ್ನೆಲೆಯನ್ನು ಉಲ್ಲೇಖಿಸುತ್ತವೆ. ಈ ಪಂಥದಲ್ಲಿ ಸ್ಥಾನಿಕ, ಅಸೀನ, ಶಯನ, ವಾಹನಾರೂಢ, ದೇವಿ ಸಹಿತ ಮೂರ್ತಿ ದಶಾವತಾರ, ಚರ್ತುರ್ವಿಶಂತೆ ಮೂರ್ತಿಗಳೆಂಬ ವಿಧಗಳಿವೆ. ಪ್ರಸ್ತುತ ದಾವಣಗೆರೆ ಪರಿಸರದಲ್ಲಿ ಸ್ಥಾನಿಕ ಮೂರ್ತಿಗಳೇ ಹೆಚ್ಚಾಗಿ ಕಂಡುಬರುತ್ತವೆ. ಅವುಗಳಲ್ಲಿ ವಿಷ್ಣು, ಕೇಶವ, ಜನಾರ್ಧನ, ಮಾದವ ಮೂರ್ತಿಗಳು ಪ್ರಮುಖವಾಗಿವೆ. ಜೊತೆಗೆ ದೇವಿ ಸಹಿತ ಅಸೀನ ಮೂರ್ತಿಗಳು ಅಲ್ಲಲ್ಲಿ ಕಂಡುಬರುತ್ತವೆ. ಹಾಗೆಯೇ ಶಯನ ಮೂರ್ತಿಗಳು ದೊರೆತಿದ್ದು, ಗರಡ, ರತಿ–ಮನ್ಮಥ ಮೂರ್ತಿಗಳು ದೊರೆತಿವೆ.

**ವಿಷ್ಣು :** ಅಗ್ನಿ ಪುರಾಣ, ಭಾಗವತದ ದಶಮಾಸಕಾಂಡ, ಹರಿವಂಶ, ವಿಷ್ಣು ಪುರಾಣ, ಮಹಾಭಾರತ, ಬ್ರಹ್ಮವೈವರ್ಥ ಪುರಾಣಗಳು ಕೃಷ್ಣನ ಅವತಾರ, ಆರಾಧನೆ ಕುರಿತು ವಿಶ್ಲೇಷಿಸುತ್ತದೆ. ಚದುರಗೊಳ, ಕಕ್ಕರಗೊಳ್ಳ, ದೇವರಹಳ್ಳಿ, ದಾವಣಗೆರೆ ಪರಿಸರದ ಮೊದಲಾದೆಡೆ ಶಯನ, ಸ್ಥಾನಿಕ, ದೇವಿ ಸಹಿತ ಅಸೀನ ಮೂರ್ತಿಗಳು ಕಂಡು ಬರುತ್ತವೆ. ನೀಳವಾದ ಮೂಗು ಹಾಗೂ ದೇಹದಾಢ್ಯ ಇವುಗಳನ್ನು ಗಮನಿಸಿದ್ದಲ್ಲಿ ಇದು ೨ ಸೇವುಣರ ಕಾಲದ್ದೆಂದು ಹೇಳಬಹುದು.

**ಸುಗ್ರೀವನ ವಿಗ್ರಹ :** ಎಲೇಬೇತೂರಿನಲ್ಲಿ ಸುಗ್ರೀವನ ದೇವಸ್ಥಾನವಿದೆ. ಈ ದೇವಾಲಯ ಪುರಾತನವಾದದ್ದು. ಆದರೆ ಹಾಳಾಗಿದ್ದ ಇದನ್ನು ಪುನಃ ನಿರ್ಮಾಣ ಮಾಡಿ ನೂತನವಾದ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ್ದಾರೆ. ಸುಗ್ರೀವ ಮತ್ತು ಆಂಜನೇಯ ವಿಗ್ರಹಗಳೂ ಒಂದೇ ರೀತಿಯಾಗಿವೆ. ಆಂಜನೇಯನ ಕೈಯಲ್ಲಿ ಗದೆಯಿದ್ದರೆ, ಸುಗ್ರೀವನ ಕೈಯಲ್ಲಿ ಬಾಳೆಹಣ್ಣಿನ ಗೊನೆಯಿದೆ, ಬಾಳೆಹಣ್ಣು ಸುಗ್ರೀವನಿಗೆ ಅತ್ಯಂತ ಪ್ರಿಯವಾದದ್ದು, ಇಬ್ಬರ ನಡುವೆ ಇರುವುದು ಒಂದೇ ವ್ಯತ್ಯಾಸವಾಗಿದೆ. ಉಲ್ಲೇಖವಿಲ್ಲಾದಿದ್ದರೂ ಹೆಸರಾಗಿದೆ. ಈ ಕುರಿತು ಶಿಲ್ಪಶಾಸ್ತ್ರದಲ್ಲಿ ಸ್ಥಳೀಯರು

ಕರೆಯುತ್ ದಕ್ಷಿಣ ಭಾರತದಲಿ ಹಂಪೆಯಲ್ಲಿ ಗುಹೆಯನ್ನು ಬಿಟ್ಟರೆ ಸುಗ್ರೀವನ ದೇವಾಲಯ ಇರುವುದು ದಾವಣಗೆರೆಯಲ್ಲಿ ಮಾತ್ರ.[೨೩]

**ಕುಬೇರ** : ಉತ್ತರ ದಿಕ್ಕಿನ ಅಧಿಪತಿಯಾದ ಕುಬೇರನು ಆನೆಯ ಮೇಲೆ ಕುಳಿತಿದ್ದಾನೆ. ಚತುರ್ಭುಜನಾದ ಈತನ ಹಸ್ತದಲ್ಲಿ ಗದೆ, ನಿಧಿಕುಂಬ, ದಾಳಿಂಬೆ ಮತ್ತು ಕಮಂಡಲವನ್ನು ಹಿಡಿದಿದ್ದಾನೆ. ನವರಂಗದ ಮೇಲಿನ ಭಾಗದಲ್ಲಿರುವ ಈ ಅಷ್ಟದಿಕ್ಪಾಲಕರ ಶಿಲ್ಪಗಳು ಭಗ್ನಗೊಂಡಿದ್ದು, ಕೆಲವೊಂದು ದಿಕ್ಕುಗಳನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿಲ್ಲ.

**ಶಾಕ್ತ ಮೂರ್ತಿಗಳು**

ಶಾಕ್ತ ಸಂಪ್ರದಾಯ ವೈದಿಕಯುಗಕ್ಕಿಂತಲೂ ಪ್ರಾಚೀನವಾಗಿರಬಹುದು, ಮಾತೃ ಮರ್ಯಾದೆ ಮತ್ತು ಆಚರಣೆಗಳು ಈ ಸಂಪ್ರದಾಯದ ಮೂಲವಾಗಿದೆ. 'ಜಗತ್ ಶಕ್ತಿಮಯಂ ವಿದ್ಯಾತ್' ಶಕ್ತಿ ಪೇರಯಿತಾ ಶಿವಾಃ ಎನ್ನುವುದು ಈ ಸಂಪ್ರದಾಯದ ಮುಖ್ಯ ನಿಲವುವಾಗಿದೆ. ಇದರಲ್ಲಿ ದಕ್ಷಿಣಾಚಾರವೆಂದೂ, ವಾಮಚಾರವೆಂದು ಎರಡು ಬಗೆಗಳಿವೆ, ಶಾಕ್ತರ ನಂಬಿಕೆ ಪ್ರಕಾರ ಎಲ್ಲಾ ಸ್ತ್ರೀಯರು ದೇವತಾ ಸ್ವರೂಪದವರು ಇದು ನೂರಾರು ಮಾತೃ ದೇವತೆಗಳ ಕಲ್ಪನೆಗೆ ಎಡೆ ಮಾಡಿಕೊಟ್ಟಿತು. ಮಾತೃ ಪರಂಪರೆಯಲ್ಲಿ ಪಾರ್ವತಿ ಶಿವನ ಹಿನ್ನೆಲೆಯಲ್ಲಿ ಪೂಜೆಗೊಳ್ಳಪಟ್ಟಿದೆ, ಲಕ್ಷ್ಮಿ ವಿಷ್ಣುವಿನ ಜೊತೆ, ಸರಸ್ವತಿ ಬ್ರಹ್ಮನೊಂದಿಗೆ ಗುರುತಿಸಿಕೊಂಡು ಆರಾಧನೆಗೊಳ್ಳುತ್ತಾರೆ. ದಾವಣಗೆರೆ ಪರಿಸರದಲ್ಲಿ ಸರಸ್ವತಿ, ಪಾರ್ವತಿ, ಲಕ್ಷ್ಮೀ, ಚಾಮುಂಡಿ, ಮಹಾಕಾಳಿ, ಮಹಿಷಾಸುರ ಮರ್ದಿನಿ, ಸಪ್ತಮಾತೃಕೆಯರ ಪ್ರತೇಕ ಮೂರ್ತಿಗಳು ಕಂಡುಬರುತ್ತವೆ.[೨೪]

**ಸರಸ್ವತಿ** : ಮಾತೃದೇವತಾ ಸಂಸ್ಕೃತಿಯಲ್ಲಿ ಸರಸ್ವತಿಗೆ ಅಗ್ರಸ್ಥಾನವಿದೆ. ಮಂಡೊಕೋ ಉಪನಿಷತ್, ವಿಷ್ಣು ಪುರಾಣ ಮತ್ತು ಮಾಕಾಂಡೇಯ ಪುರಾಣಗಳು ಬ್ರಹ್ಮ ಮತ್ತು ಸರಸ್ವತಿಯ ಆರಾಧನೆಯನ್ನು ಉಲ್ಲೇಖಿಸುತ್ತದೆ. ಎಲೇಬೇತೂರಿನಲ್ಲಿರುವ ಸರಸ್ವತಿ ವಿಗ್ರಹವು ಚರ್ತುಭುಜಧಾರಿಯಾದ ಈ ಮೂರ್ತಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದು, ಕಿರೀಟ ಮುಕುಟಧಾರಿಯಾಗಿದೆ. ಕಿವಿಯಲ್ಲಿ ಚಕ್ರಕುಂಡಲ, ಮೂಗಿನಲ್ಲಿ ಮೂಗುಬೊಟ್ಟು, ಕೊರಳಲ್ಲಿ ಕಂಕಣಾಭರಣ, ವಿವಿಧ ಬಗೆಯ ಕೊರಳಹಾರ, ಶಿರಶ್ಚಕ್ರಗಳಿಂದ ಅಲಂಕೃತವಾಗಿದೆ.[೨೫] ಬಾಗಳಿಯ ಸರಸ್ವತಿ ಮೂರ್ತಿಯಂತೆ ಈ ಮೂರ್ತಿಯು ವೈಜಯಂತಿ ಮೂಲೆಯು ಸಹ ಪೀಠದವರೆಗೆ ಇಳಿಬಿದ್ದಿದೆ. ಚತುರ್ಭುಜಧಾರಿ ಈ ಮೂರ್ತಿಗೆ ಭುಜಕೀರ್ತಿ, ಕೇಯೂರ, ಕೈಕಡಗಗಳಿದ್ದು, ಮೇಲಿನ ಕೈಯಲ್ಲಿ ಅಂಕುಶ, ಪಾಶ, ಕೆಳಗಿನ ಕೈಯಲ್ಲಿ ಅಕ್ಷ ಮಾಲೆ ಹಾಗೂ ಪುಸ್ತಕವಿದ್ದು, ಬೆರಳುಗಳಲ್ಲಿ ಉಂಗುರಗಳಿವೆ, ನಡುವಿನಲ್ಲಿ ಕಟಿಬಂಧವಿದ್ದು, ಕಾಲುಗಳ ಮೇಲೆ ಸೊಂಟದಿಂದ ಇಳಿಬಿದ್ದ ವಸ್ತ್ರವಿದೆ. ಅಲಂಕೃತ ಕಾಲ್ಲಡಗ ಹಾಗೂ ಪಾದರಗಳಿವೆ. ಎಡ ಮತ್ತು ಬಲದಲ್ಲಿ ಪದ್ಮ ಮತ್ತು ಫಲಗಳನ್ನು ಹಿಡಿದ ಸ್ತ್ರೀ ಶಿಲ್ಪಗಳಿವೆ.

ಹಾಗೆಯೇ ಅಲಂಕೃತ ಪ್ರಭಾವಳಿ ಸುತ್ತಲೂ ಇದೆ, ನೀಳವಾದ ಮೂಗು ಹುಬ್ಬುಗಳು ಈ ಮೂರ್ತಿಯ ಅಂದವನ್ನು ಹೆಚ್ಚಿಸಿದೆ. ಈ ಮೂರ್ತಿಯ ಲಕ್ಷಣವನ್ನು ಆಧರಿಸಿ ಇದು ಕಲ್ಯಾಣ ಚಾಲುಕ್ಯರ ಕಾಲದ್ದೆಂದು ಹೇಳಬಹುದಾಗಿದೆ.

**ಪಾರ್ವತಿ** : ಪಾರ್ವತಿಯನ್ನು ಶಿವನ ಪತ್ನಿಯೆಂದು, ಪರ್ವತ ರಾಜನ ಮಗಳೆಂದು ಗುರುತಿಸಲಾಗಿದೆ. ಪಾರ್ವತಿಗಾಗಿ ಕಟ್ಟಿಸಿದ ಪ್ರತ್ಯೇಕ ದೇವಾಲಯಗಳು ದಾವಣಗೆರೆ ಜಿಲ್ಲೆಯಲ್ಲಿ ಇರದಿದ್ದರೂ, ಅಲ್ಲಿಲ್ಲಿ ಪಾರ್ವತಿಯ ಪ್ರತ್ಯೇಕ ಮೂರ್ತಿಗಳು ದೊರೆತಿವೆ. ಎಲೇಬೇತೂರಿನ ಕಲ್ಲೇಶ್ವರ ದೇವಾಲಯದಲ್ಲಿರುವ ಪಾರ್ವತಿ ವಿಗ್ರಹವು ಲಲಿತಾಸನದಲ್ಲಿ ಪೀಠದ ಮೇಲೆ ಅಸೀನವಾಗಿರುವ ಈ ಮೂರ್ತಿ ಕಿರೀಟ ಮುಕುಟಧಾರಿಯಾಗಿದ್ದು, ಕಿವಿಯಲ್ಲಿ ಪತ್ರ ಕುಂಡಲಗಳಿವೆ, ತಲೆ ಹಿಂಬದಿಯಲ್ಲಿ ಶಿರಶ್ಚಕ್ರವಿದ್ದು, ಕಂಠಾಭರಣ, ಎದೆಹಾರ, ಕುಚಬಂಧಗಳಿವೆ. ಯಜ್ಞೋಪವೀತ, ವೈಜಯಂತಿ ಹಾರಗಳನ್ನು ಧರಿಸಿದ ಈ ಮೂರ್ತಿ ಚರ್ತುಭುಜದಾರಿಯಾಗಿದ್ದು, ಭುಜಕೀರ್ತಿ, ಕೈಕಡಗಗಳನ್ನು ಧರಿಸಿದ ಕೆಳ ಎಡಗೈಯಲ್ಲಿ ಫಲ, ಬಲಗೈಯಲ್ಲಿ ಪದ್ಮವಿದ್ದು, ಮೇಲಿನ ಕೈಗಳಲ್ಲಿ ತ್ರಿಶೂಲ, ಡಮರುಗಳಿವೆ. ಕಾಲುಗಳಲ್ಲಿ ಕಾಲ್ಗಡಗ, ಪಾದಸರಳಿದ್ದು, ಹಿಂಬದಿಯಲ್ಲಿ ಸಾಧಾರಣ ರೀತಿಯ ಪ್ರಭಾವಳಿ ಇದೆ.[೨೬] ಮೂರ್ತಿ ಲಕ್ಷಣದ ಆಧಾರದ ಮೇಲೆ ಇದು ಕಲ್ಯಾಣ ಚಾಲುಕ್ಯರ ಕಾಲದ್ದೆಂದು ಹೇಳಬಹುದು.

**ಮಹಿಷಾಸುರ ಮರ್ದಿನಿ** : ಶಕ್ತಿ ದೇವತೆಗಳಲ್ಲಿ ಮಹಿಷಮರ್ದಿನಿ ಒಬ್ಬಳಾಗಿದ್ದಾಳೆ. ಈ ದೇವತೆಯು ಉಗ್ರರೂಪವಾಗಿದ್ದು ಕ್ರಿಯೆಯಲ್ಲಿ ಕೊಲ್ಲುತ್ತಿರುವುದೇ ಪ್ರಾಮುಖ್ಯವಾಗಿರುತ್ತದೆ. ಶಾಸ್ತ್ರ ಗ್ರಂಥಗಳಲ್ಲಿ ಈಕೆಯು ಕೋಪಗೊಂಡ ಯುವತಿಯಂತಿದ್ದು, ಒಂದು ಮುಖ ಹಾಗೂ ಅನೇಕ ಕೈಗಳನ್ನು ಹೊಂದಿರುತ್ತಾಳೆಂದು ವರ್ಣಿಸಿದೆ. ಈಕೆಯನ್ನು ದುರ್ಗಾ ದೇವತೆಂದು ಸಹ ಕರೆಯುತ್ತಾರೆ. ಮಹಿಷಮರ್ದಿನಿಯ ಮುಖವು ಶಿವನ ಬೆಳಕಿಂದಲೂ, ಯಮನ ಶಕ್ತಿಯಿಂದ ಕೂದಲು, ವಿಷ್ಣುವಿನ ಶಕ್ತಿಯಿಂದ ಕೈಗಳು, ಚಂದ್ರನ ಬೆಳಕಿನಿಂದ ಸ್ತನಗಳು, ಇಂದ್ರನಿಂದ ನಡುವು ಹೀಗೆ ಒಂದೊಂದು ದೇವತೆಯ ಬೆಳಕಿನಿಂದ ರೂಪಿತವಾಗಿರುತ್ತವೆ.[೨೭] ಮಹಿಷನು ಕೋಣದ ರೂಪವನ್ನು ಧರಿಸಿ ಬಂದಾಗ, ಮಹಿಷ ಮರ್ದಿನಿಯು ಕೋಣದ ತಲೆಯನ್ನು ಕತ್ತರಿಸಿ ಕಾಲಿನಿಂದ ಅದನ್ನು ತುಳಿದಾಗ ಅಸುರನ್ನು ಕತ್ತಿನಿಂದ ಹೊರಬರುತ್ತಾನೆ. ಆನಂತರ ಅವನನ್ನು ಸಂಹರಿಸುತ್ತಾಳೆ. ಮಹಿಷಾಸುರ ಮರ್ಧಿನಿ ಮೂರ್ತಿಗಳಲ್ಲಿ ಬಹುತೇಕ ಇಂತಹ ವಿವರಣೆಯನ್ನು ಕಾಣಬಹುದಾಗಿದೆ.

ಎಲೇಬೇತೂರಿನಲ್ಲಿರುವ ಕಾಳಿಕಾ ದೇವಾಲಯದ ಮಹಿಷ ಮರ್ದಿನಿ ವಿಗ್ರಹದ ಪೀಠದ ಮೇಲೆ ಭಂಗಿಯಲ್ಲಿರುವ ಈ ಮೂರ್ತಿಯು ಅಷ್ಟಭುಜಗಳಿವೆ. ಕಿರೀಟ ಮುಕುಟಧಾರಿಯಾದ ಮೂರ್ತಿಯು ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಕಂಠಾಭರಣ, ಎದೆಹಾರಗಳಿದ್ದು, ಕುಂಚಬಂಧವಿದೆ. ಭುಜಕೀರ್ತಿ, ಕೈಯೂರ, ಕೈಡಗಗಳನ್ನು ಧರಿಸಿದ ಈ ಮೂರ್ತಿಯು ಕೈಗಳಲ್ಲಿ ಆಯುಧಗಳನ್ನು ಹಿಡಿದಿದೆ. ಕಟಿಬಂಧ, ಪಾದದವರೆಗೆ ಇಳಿಬಿದ್ದ ವಸ್ತ್ರ ಧರಿಸಿದ ಈ ಮೂರ್ತಿ ಎಡಗಾಲನ್ನು ಪೀಠದ

ಮೇಲಿಟ್ಟು ಬಲಗಾಲನ್ನು ಅಸುರನ ಮೇಲಿಟ್ಟು ತುಳಿಯುವಂತಿದೆ. ಕಾಲಿನಲ್ಲಿ, ಕಾಲ್ಗಡಗ, ಹಾರ ಸರಗಳಿವೆ, ಕಾಲಿನ ಬಲಭಾಗದಲ್ಲಿ ಶಿರಚ್ಛೇದಿತ ಕೋಣನ ದೇಹ ಮಾತ್ರವಿದೆ. ಅದೇ ದೇಹವನ್ನು ದೇವಿಯ ವಾಹನವಾದ ಸಿಂಹವು ತನ್ನ ಮುಂಗಾಲಿನಿಂದ ಹಿಡಿದಿದೆ. ಖಡ್ಗ ಹಿಡಿದ ಕಳೆಭಾಗದ ಬಲಗೈ ಬಳಿ ಮಹಿಷನ ಛೇದಿತ ಶಿರವಿರುವುದು ಈ ಮೂರ್ತಿಯ ವಿಶೇಷವಾಗಿದೆ.

**ಜಿನ ಮೂರ್ತಿಗಳು**



ಪ್ರಾಚೀನ ಜೈನಾಗಮ ಗ್ರಂಥಗಳಲ್ಲಿ ಜಿನಬಿಂಬಗಳ ಜಿನಾಲಯಗಳ ಉಲ್ಲೇಖಗಳು ಅಪರೂಪ, ಜೈನಧರ್ಮದ ಪ್ರಾರಂಭದ ಘಟ್ಟಗಳಲ್ಲಿ ಬಸದಿ ಕಟ್ಟಿಸುವ, ಜಿನಮೂರ್ತಿಗಳನ್ನು ಮೂಡಿಸುವ ಪದ್ಧತಿ ಇರಲಿಲ್ಲ, ತೀರ್ಥಂಕರ ಮೂರ್ತಿಗಳನ್ನು ಮೂಡಿಸುವ, ಬಸದಿಗಳನ್ನು ಕಟ್ಟಿಸುವ ಈ ಪದ್ಧತಿಯ ಆಗಮೋತ್ತರ ಕಾಲಘಟ್ಟದಲ್ಲಿ ಬೆಳೆದ ಸಂಪ್ರದಾಯ. ಇಂತಹ ಸಂಪ್ರದಾಯವು ಮೌರ್ಯರ ಆಳ್ವಿಕೆಯ ಕಾಲದಲ್ಲಿ ಪ್ರಚಲಿಗೊಂಡಿತು. ಕ್ರಿಪೂ. ಮೂನ್ನರರ ಅಸುಪಾಸಿನಲ್ಲಿ ಮಹಾವೀರರನ್ನು ವೈಭವೀಕರಿಸಿ ದೈವತ್ವದ ನೆಲೆಗೆ ಒಯ್ಯಲಾಯಿತು. ಜೈನ ಅಚಾರ್ಯರು ಏಕಾಗ್ರತೆಗೋಸ್ಕರ ಏಕಾಂತ ಸ್ಥಳಗಲ್ಲಿ ಬೆಟ್ಟ, ಗುಹೆ, ಪೊಟರೆಗಳಲ್ಲಿ ಇರುತ್ತಿದ್ದರು. ಪ್ರಾಕೃತಿಕ ಗುಹೆಗಳು ಪಾದ ಚಿಹ್ನೆಗಳು ಪೂಜಿಸುತ್ತಿದ್ದರು. ಶ್ರವಣಬೆಳಗೋಳ, ಕೊಪ್ಪಳ ಮುಡಬಿದುರೆ ಮೊದಲಾದ ಸ್ಥಳಗಳಲ್ಲಿ ಇದರ ಪಳೆಯುಳಿಕೆಗಳು ಇಂದಿಗೂ ಉಳಿದು ಬಂದಿದೆ. ಇದು ಬಸದಿಗಳ ಮತ್ತು ಜಿನ ಮೂರ್ತಿಗಳ ರಚನೆಗೂ ಪೂರ್ವದಲ್ಲಿದ್ದ ಅರಾಧನಾ ಪದ್ಧತಿಯಾಗಿತ್ತು.

ಬಸದಿ ಎಂಬುದು ಸಂಸ್ಕೃತದ 'ವಸತಿ' ಎಂಬ ಶಬ್ದದ ತದ್ಭವ ರೂಪವಾಗಿದೆ ಇದು ಕನ್ನಡದಲ್ಲಿ ಜೈನ ದೇವಾಲಯ ಎಂಬರ್ಥದಲ್ಲಿ ಬಳಕೆಯಲ್ಲಿದೆ. ಪ್ರಾಚೀನವಾದ ಬಸದಿಗಳನ್ನು ಬೇರೆ ಜೈನ ಹೆಸರುಗಳಿಂದ ಕರೆಯಲಾಗಿದೆ. ಅವುಗಳೆಂದರೆ ಅರ್ಹತಪರಮೇಷ್ಠಿ ಜೈತ್ಯಾಲಯ, ಜಿನಗೃಹ, ಜಿನಾಲಯ, ಚೇದಿಯ, ಜಿನಗೇಹ ಜಿನನಾಥವಾಸ, ಜಿನಭವನ, ಜಿನಮಂದಿರ, ಮುಂತಾದ ಹೆಸರುಗಳಿಂದ ಶಾಸನಗಳಲ್ಲಿ ಬಳಸಲಾಗಿದೆ. ಪೂಜಾ ಸಂಪ್ರದಾಯ ಉಗಮಕ್ಕೂ ಬಸದಿಗಳೇ ಜನ್ಮ ಸ್ಥಳ, ದಾನ ದತ್ತಿಗಳಿಂದ ಬಸದಿಗಳು ಬಾಳಿದವು ಬೆಳೆದವು. ಕರ್ನಾಟಕದ ಪ್ರಬಲ ಮತ್ತು ಪ್ರಮುಖ ಎಲ್ಲಾ ಅರಸು ಮನೆತನಗಳು ಜೈನಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಇದರಲ್ಲಿ ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಮುಂತಾಗಿ ಜೈನ ಧರ್ಮವನ್ನು ಅನೇಕ ರೀತಿಯಲ್ಲಿ ಬೆಳೆಸಿಕೊಂಡು ಬಂದಿದ್ದಾರೆ. ಜಿನ ಮೂರ್ತಿಗಳನ್ನು ಗುರುತಿಸಬೇಕಾದರೆ ಪೀಠದ ಕೆಳಗೆ ಇರಬಹುದಾದ ಶಾಸನ ಅಥವಾ ಲಾಂಛನಗಳು ನೋಡಿದರೆ ಸಹಾಯ ಮಾಡುತ್ತದೆ.

ದಾವಣಗೆರೆಯ ಹತ್ತಿರದ ಗ್ರಾಮ ಎಲೇಬೇತೂರಿನಲ್ಲಿ ಗ್ರಾಮದ ಮಧ್ಯದಲ್ಲಿ ಬಯಲು ಕಟ್ಟೆಯ ಮೇಲೆ ಮೂರು ಸುಂದರವಾದ ಜೈನ ಮೂರ್ತಿಗಳು ಕಂಡು ಬರುತ್ತದೆ. ಈ ಜೈನ ಮೂರ್ತಿಗಳ ತಲೆಯಲ್ಲಿನ ಕೂದಲು ಗುಂಗುರಾಗಿ ಸುರಳಿಯೋಪಾದಿಯಲ್ಲಿ ಸುತ್ತಲ್ಪಟ್ಟಿದೆ. ಆ ಕೂದಲುಗಳು ಭುಜಗಳ ಮೇಲೆ ಇಳಿ ಬಿದ್ದಿವೆ ಮುಚ್ಚಿದ ಕಣ್ಣುಗಳು ಮಂದಹಾಸ ಬೀರುತ್ತಿರುವ ಮುಖಭಾವವಿದೆ. ದ್ವಿಭುಜಧಾರಿಯಾದ ಈ ಜೈನ ಮೂರ್ತಿಯು ಧ್ಯಾನಸಕ್ತವಾಗಿ ಪದ್ಮಾಸನದಲ್ಲಿ ಕುಳಿತ ರೀತಿಯಲ್ಲಿ ಈ ಮೂರು ಮುರ್ತಿಗಳು ಒಂದೇ ಸಮಾನ ಎತ್ತರ ಮತ್ತು ಸಮಾನ ಅಳತೆಯನ್ನು ಹೊಂದಿದೆ. ದಾವಣಗೆರೆ ಜಿಲ್ಲೆಯ ಬಸವಪಟ್ಟಣದಲ್ಲಿರುವ ಮೂರ್ತಿಗಳಿಗಿಂತ ಎತ್ತರದಲ್ಲಿ ದೊಡ್ಡದಾಗಿದೆ.[೨೮] ಇವುಗಳ ಶೈಲಿಯ ಮೇಲೆ ಮಧ್ಯಯುಗದ ಕಾಲಕ್ಕೆ ಸೇರುತ್ತವೆ ಎಂದು ಹೇಳಬಹುದಾಗಿದೆ. ದಾವಣಗೆರೆ ಕಸಬಾ ಪರಿಸರದ ಗ್ರಾಮವಾದ ಶ್ಯಾಮನೂರು ಎಂಬಲ್ಲಿ ಕೆಲವು ಜೈನ ಮೂರ್ತಿಗಳು ದೊರಕಿವೆ. ಬೇತೂರಿನಿಂದ ಆಳ್ವಿಕೆ ಮಾಡಿದ ಚಾವುಂಡರಸನು ಜೈನ ಮತಾವಲಂಬಿಯಾಗಿದ್ದ ಎಂಬ ಅಂಶ ಕಂಡು ಬರುತ್ತದೆ.

### ೩.೩ ಕೆರೆ-ಕಟ್ಟೆಗಳು

ಕ್ರಿಸ್ತಶಕ ಆರಂಭದ ಶತಮಾನಗಳಲ್ಲಿ ಕರ್ನಾಟಕವು ಅತೀ ಪ್ರಾಚೀನ ನೀರಾವರಿ ಯೋಜನೆಯನ್ನು ಅಳವಡಿಸಿಕೊಂಡಿತ್ತೆಂಬುದು ಶಿಲಾಶಾಸನಗಳಿಂದ ತಿಳಿಯುತ್ತದೆ. ಚಂದ್ರವಳ್ಳಿ, ತಾಳಗುಂದ ಮತ್ತು ಗುಡ್ನಾಪುರ ಕೆರೆಗಳು ಕದಂಬರ ಕಾಲದ ಕೆರೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಕೆರೆಗಳನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು ಒಂದು ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು. ರಾಜರು, ರಾಣಿಯರು, ಮಂತ್ರಿ ಮಹೋದಯರು, ದಂಡನಾಯಕರು, ಅಧಿಕಾರಿಗಳು, ಗಣ್ಯರು, ವರ್ತಕರು ದೇವಸ್ಥಾನ ಕಟ್ಟಲು ತೋರಿಸಿದ ಭಕ್ತಿ ಭಾವದಿಂದಲೇ ಕೆರೆ ಮತ್ತು ಜಲಾಶಯಗಳನ್ನು ಕಟ್ಟುತ್ತಿದ್ದರು. ಹಂಪಿಯ ಲಕ್ಷ್ಮೀಧರನ ಶಿಲಾಶಾಸನ ಒಂದರಲ್ಲಿ ತಾಯಿ ತನ್ನ ಮಗುವಿಗೆ ಹಾಲೆರೆಯುವಾಗ 'ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಂಗಳಂ ಮಾಡಿಸು' ಎಂದು ಹಾಡುತ್ತಿದ್ದಳೆಂದು ಹೇಳಿದೆ.

ಮಾನವನು ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ಕೆರೆ, ನದಿ, ತೊರೆಗಳ ಸಮೀಪದಲ್ಲಿಯೇ ಕೇಂದ್ರಿಕೃತವಾಗಿತ್ತು. ಮಾನವನ ಸರ್ವತೋಮುಖ ಅಭಿವೃದ್ಧಿ ವ್ಯವಸಾಯದ ಅವಿಷ್ಕಾರದಿಂದಲೇ ಪ್ರಾರಂಭವಾಯಿತು. ಒಂದು ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ವ್ಯವಸಾಯ ತಳಹದಿಯಾಯಿತು. ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಮಾನವ ಮಳೆಯನ್ನು ನಂಬಿದ ವಿಪುಲವಾಗಿ ನೀರು ಸಿಗುವ ಭಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು, ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆ ಮತ್ತು ಸಕಾಲದ ವೈಫಲ್ಯತೆಯು ಅವನನ್ನು ಕಷ್ಟಕ್ಕೆ ಒಳಪಡಿಸುತ್ತಿದ್ದರಿಂದ ಅವನು ನೀರನ್ನು ಸಂಗ್ರಹಮಾಡಿ ಉಪಯೋಗ ಮಾಡತೊಡಗಿದ. ಮುಂದೆ

ವ್ಯವಸಾಯಕ್ಕೆ ಉಪಯೋಗಿಸಲು ನೀರಿಗೆ ಒಡ್ಡು ಹಾಕಿ ಸಂಗ್ರಹ ಮಾಡಲು ಪ್ರಾರಂಭಿಸಿದ, ನಂತರ ಇವುಗಳೇ ಕೆರೆ ಕುಂಟೆಗಳಾಗಿ ಉಗಮಗೊಂಡವು.

**ನಾಮಾವಳಿಗಳು**

ಕೆರೆಯನ್ನು ಕಟ್ಟಿಸುವುದು ಧಾರ್ಮಿಕ ಕಾರ್ಯವೆಂದು ದೇವಾಲಯ ನಿರ್ಮಾಣದ ಕಾರ್ಯವೆಂದು ನಮ್ಮ ಹಿರಿಯರು ನಂಬಿಕೆಯಾಗಿತ್ತು, ಧಾರ್ಮಿಕ ಭಾವನೆಗಳಿಂದಾಗಿ ಅಂದಿನ ನೀರಾವರಿ ಕಾರ್ಯಕ್ಕೆ ಚಾಲನೆ ದೊರೆಯಿತು. ಕೆರೆಗಳನ್ನು ಕಟ್ಟಿಸಿ ಅದನ್ನು ಜನರಿಗೆ ಸಮರ್ಪಿಸುವಾಗ ಅದಕ್ಕೊಂದು ಹೆಸರಿಡುವುದು ಸಾಮಾನ್ಯವಾಗಿತ್ತು. ಕೆರೆಗಳ ನಾಮಾವಳಿಯ ಒಂದು ರೋಚಕ ಇತಿಹಾಸ, ಶಬ್ದಾರ್ಥವಾಗಿ ಕೆರೆಯನ್ನು ಕಟ್ಟೆ, ಕುಂಟೆ, ತಟಾಕ, ಸರೋವರ ಎಂಬ ಹೆಸರುಗಳಿಂದ ಕರೆಯಾಲಾಗುತ್ತದೆ.

**ವರ್ಗೀಕರಣ**

ಒಂದು ಕೆರೆಯ ವಿಸ್ತೀರ್ಣ, ಆಳತೆ, ಅಗಾಧತೆ, ಮತ್ತು ಆಳವನ್ನು ಗಮನದಲ್ಲಿರಿಸಿಕೊಂಡು ಅವುಗಳನ್ನು ವರ್ಗೀಕರಿಸುತ್ತಾರೆ, ಕೆರೆಯ ಆಯಕಟ್ಟು ಪ್ರದೇಶಗಳಿಗೆ ನೀರುಣಿಸುವ ಸಾಮಾರ್ಥವನ್ನು ಮುಖ್ಯ ಆಳತೆಗೋಲನ್ನಾಗಿಸಿಕೊಂಡು ಕೆರೆಯ ಹಿರಿಯ, ಪಿರಿಯ, ಚಿಕ್ಕ ಇವೇ ಮುಂತಾದ ಗುಣವಾಚಕಗಳನ್ನು ಜೋಡಿಸಿರುವುದನ್ನು ಕಂಡುಕೊಳ್ಳುಬಹುದಾಗಿದೆ. ಉದಾಹರಣೆಗೆ : ಹಿರಿಯ ಕೆರೆಯ ನೀರಿನಿಂದ ಇನ್ನುರಕ್ಕೊ ಹೆಚ್ಚು ಎಕರೆಗಳನ್ನು ಕೃಷಿಗೆ ಒಳಪಡಿಸಿದರೆ, ಚಿಕ್ಕ ಕೆರೆಯು ಐವತ್ತು ಎಕರೆಯಷ್ಟು ಭೂಮಿಯನ್ನು ಕೃಷಿಗೆ ಒಳಪಡಿಸಬಹುದು. ಕೆರೆಯನ್ನು ಮತ್ತೊಂದು ಬಗೆಯಾಗಿ ವರ್ಗೀಕರಿಸಬಹುದು ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ಎರಡು ಪ್ರಕಾರಗಳು.

೧. ನದಿ ಆಶ್ರಿತ ಕೆರೆಗಳು (ನದಿ ಮಾತೃಕೆ)

೨. ಮಳೆ ಆಶ್ರಿತ ಕೆರೆಗಳು (ದೇವ ಮಾತೃಕೆ)

**ಕೆರೆಗಳ ನಿರ್ಮಾಣ**

ಕೆರೆಗಳ ನಿರ್ಮಾಣದಲ್ಲಿ ನಮ್ಮ ಹಿರಿಯರು ಅಳವಡಿಸಿಕೊಂಡಿರುವ ವಿಧಾನಗಳ ಬಗ್ಗೆ ನಮಗೆ ಸಿಗುವ ಮಾಹಿತಿ ಬಹುಮಟ್ಟಿಗೆ ಕಡಿಮೆ ಎಂದು ಹೇಳಬಹುದು. ಅವರು ಕಟ್ಟೆಯ ಎರಡು ಕಡೆಯ ಇಳಿಜಾರುಗಳನ್ನು ಯಾವ ಸೂತ್ರವನ್ನು ಅವಲಂಬಿಸಿ ನಿರ್ಮಿಸುತ್ತಿದ್ದರು ಕೋಡಿಯನ್ನು ನಿರ್ಮಿಸುವಾಗ ಯಾವ ಅಂಶಗಳನ್ನು ಅನುಸರಿಸುತ್ತಿದ್ದರು ಎಂದು ತಿಳಿವುದು ಕಷ್ಟಕರವಾಗಿದೆ.[೩೦] ಈ ಬಗೆಯ ಪ್ರಶ್ನೆಗಳಿಗೆ ನಮಗೆ ಯಾವ ಉತ್ತರವು ಸಿಗುವುದಿಲ್ಲ, ನಮ್ಮ ಪೂರ್ವಿಕರ ಯಾವ ಲಿಖಿತ ದಾಖಲೆಯನ್ನು ಇಟ್ಟಿರುವುದಿಲ್ಲ. ಅಲ್ಪಸ್ವಲ್ಪ ಈ ವಿಷಯವಾಗಿ ನಮಗೆ ಮಾಹಿತಿ ಸಿಗುವುದು

ಇರುವುದು ಆಂಧ್ರ ಪ್ರದೇಶದ ಕಡಪ ಜಿಲ್ಲೆಯ ಒಡವೇಲು ತಾಲೂಕಿನಲ್ಲಿ ಕೆರೆಯ ಹೆಸರು ಅನಂತರಾಜ ಸಾಗರ. ಇದನ್ನು ಕಟ್ಟಿಸಿದ್ದು ೧೪ನೇ ಶತಮಾನದಲ್ಲಿ ವಿಜಯನಗರ ಅರಸರ ಕಾಲದಲ್ಲಿ. ಈ ಶಾಸನದಲ್ಲಿ ನಮಗೆ ತಿಳಿಸುವ ಮುಖ್ಯ ಅಂಶವೆಂದರೆ ಕೆರೆಕಟ್ಟಲು ಮುಖ್ಯವಾಗಿ ಕಟ್ಟೆಯ ಭದ್ರವಾದ ಬುನಾದಿ ಮತ್ತು ಕೆರೆ ಅಂಗಳ ನೀರು ಸೋರಿ ಹೋಗದಿರುವಂತಹ ಭೂಮಿಯಾಗಿರಬೇಕೆಂಬುರ ಬಗ್ಗೆ ಮಹತ್ವವನ್ನು ಕೊಟ್ಟಿರುತ್ತದೆ. ಈ ಅಂಶಗಳು ಇಂದಿಗೂ ಗಣನೀಯವಾದ ಅಂಶವಾಗಿದೆ. ಕೆರೆ ಜಲಾಶಯಗಳ ನಿರ್ಮಾಣದಲ್ಲಿ ವಿಶಿಷ್ಟವಾದ ವೈಜ್ಞಾನಿಕ ದೃಷ್ಟಿಯನ್ನು ಪಡೆದಿದ್ದರು.

**ಕೆರೆಗಳ ರಚನೆ**

ದಾವಣಗೆರೆ ಪರಿಸರದ ಪ್ರಾಚೀನ ಕೆರೆಗಳ ರಚನೆಯಲ್ಲಿ ತುಂಬಾ ವೈಶಿಷ್ಟತೆಯನ್ನು ಕಾಣುತ್ತದೆ. ನೀರಾವರಿ ತಂತ್ರಜ್ಞಾನ ಕುರಿತಂತೆ ನಮ್ಮಲ್ಲಿ ಪ್ರತ್ಯೇಕವಾದ ಪ್ರಾಚೀನ ಲಿಖಿತ ಗ್ರಂಥಗಳಿಲ್ಲ ಹಾಗೆಂದರೂ ಸಹ ಅದರ ಕುರಿತು ನಮ್ಮ ಪೂರ್ವಿಕರಿಗೆ ತಿಳುವಳಿಕೆ ಇದ್ದಿಲ್ಲವೆಂರ್ಥವಲ್ಲ. ಲಿಖಿತ ದಾಖಲೆಗಳನ್ನು ಬರೆದಿಡುವ ಪರಿಪಾಠವಿರಲಿಲ್ಲ. ಭಾರತೀಯರದು ಮೌಖಿಕ ಪರಂಪರೆಯ ಜ್ಞಾನ ತಲೆ ಮಾರಿನಿಂದ ತಲೆಮಾರಿಗೆ ಮೌಖಿಕವಾಗಿ ಹರಿದು ಬಂದ ಜ್ಞಾನವೇ ಅವರ ಬದುಕಿಗೆ ದಾರಿ ದೀಪವಾಗಿತ್ತು.[೩೧] ಅವರಿಗಿದ್ದ ನೀರಾವರಿ ತಂತ್ರಜ್ಞಾನವನ್ನು ಅಳಿದುಳಿದ ಅನೇಕ ಪ್ರಾಚೀನ ಕೆರೆಗಳನ್ನ ದಾವಣಗೆರೆ ಪ್ರದೇಶದಲ್ಲಿ ಇಂದಿಗೂ ಕಾಣಬಹುದು. ಕೆರೆಗಳ ಕುರಿತು ನಮ್ಮ ಹಿರಿಯರಿಗಿದ್ದ ಸೂಕ್ಷ್ಮ ಜ್ಞಾನವನ್ನು ಕೆರೆಗಳ ಸರಪಳಿ ವ್ಯವಸ್ಥೆಯಲ್ಲಿ ಕಟ್ಟಿರುವುದು ಏರಿಯನ್ನು ಡೊಂಕಾಗಿ ಕಟ್ಟಿರುವುದು ತೂಬು ಮತ್ತು ಕೋಡಿಗಳ ವಿನ್ಯಾಸದಲ್ಲಿ ಸ್ಪಷ್ಟವಾಗಿ ಕಾಣಬಹುದು. ಅಷ್ಟೇ ಏಕೆ ಕೆರೆಗಳ ನಿರ್ಮಾಣದ ಸ್ಥಳದ ಆಯ್ಕೆಯಲ್ಲಿ ಅವರು ತೋರಿಸಿದ ಜಾಣ್ಮೆ ಇಂದಿಗೂ ಅನುಕರಣೀಯವಾಗಿದೆ. ಕೆರೆಯ ತಂತ್ರಜ್ಞಾನದ ವಿಷಯದಲ್ಲಿ ದಾವಣಗೆರೆ ಪಾಳೆಗಾರರು ಕಟ್ಟಿಸಿದ ಕೆರೆಗಳು ಸಾಕ್ಷಿಯಾಗಿದೆ. ವಿಜಯನಗರ ಅರಸರ ಕಾಲದಲ್ಲಿ ಜಲಾಶಾಯಗಳ ನಿರ್ಮಾಣವು ಉನ್ನತ ಸ್ಥಿತಿ ತಲುಪಿತೆಂದು ಹೇಳಬಹುದು. ಅವರು ನಿರ್ಮಿಸಿದ ಅನೇಕ ಕೆರೆಗಳಾದ ಬುಕ್ಕಾಂಬುದಿ ಕೆರೆ, ದೇವರ ಬೆಳಕೆರೆ, ಖಗ್ಗಿಕೆರೆ ಹಾಗೂ ಹರಪನಹಳ್ಳಿಯಲ್ಲಿ ಕಟ್ಟಿಸಿದ ಕೆರೆಗಳು ಈಗಲೂ ಬಳಕೆಯಲ್ಲಿರುವುದು ಇಂದಿಗೂ ಕಂಡುಬರುತ್ತದೆ.

**ಜನಪದ ಸಾಹಿತ್ಯ**

ಕೆರೆಗಳ ಕುರಿತಾಗಿ ಶಾಸನಗಳನ್ನು ಬಿಟ್ಟರೆ ಹೆಚ್ಚಿನ ಮಾಹಿತಿ ದೊರೆಯುವುದು ಜನಪದ ಸಾಹಿತ್ಯದಿಂದಲೇ ಅಂದರೆ ಅದನ್ನು ಗ್ರಂಥಗಳಾಗಿ ಮಾಡುವ ಕೆಲಸ ಅಷ್ಟಾಗಿ ನಡಿದು ಬಂದಿಲ್ಲ ಎಂದು ಹೇಳಬಹುದು. ಕೆರೆಗೆಹಾರ, ಕೆರೆಹೊನ್ನಮ್ಮ, ಮದಗದಕೆರೆ ಮುಂತಾದ ಕಥೆಗಳಿಂದ ಹೊರ

ಬಂದಿವೆಯಾದರು ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಾದ ಹಾಡು, ಗಾದೆ, ಒಗ್ಗಟು, ಲಾವಣಿಗಳಿಂದ ತುಂಬಿರುವ ಕೆರೆಯ ತೂಬನ್ನೆತ್ತಿ ಹರಿಸುವ ಕೆಲಸ ಇನ್ನೂ ಆಗಬೇಕಾಗಿದೆ.

**ಕೆರೆಹೊನ್ನಮ್ಮ**

ದಾವಣಗೆರೆ ಪರಿಸರದ ಗ್ರಾಮ ಅಣಜಿಯ ಕೆರೆಗೆ ಬಂದಿರುವ ಹೆಸರಗಿದೆ. ಕಾರಣ ಜಾನಪದದಲ್ಲಿ ಈ ಕೆರೆಯ ಬಗ್ಗೆ ಕಟ್ಟಿರುವ ಒಂದು ಕಥೆ ಸುಂದರವಾಗಿದೆ. ಮಲ್ಲೇಗೌಡ ಮತ್ತು ಒಡ್ಡಗೌಡ ಒಂದು ಕೆರೆಯನ್ನು ಕಟ್ಟಿಸಿದ್ದರು. ಈ ಕೆರೆಯ ನೀರು ಬರುವುದು ಕನಸ್ಸಿನ ಮಾತಾಗಿತ್ತು. ಒಡ್ಡಗೌಡನ ಕನಸ್ಸಿನಲ್ಲಿ ಬಂದು ಹಾರವನ್ನು ಕೇಳಿದಾಗ ಒಡ್ಡಗೌಡ ಯಾರಿಗೂ ಹೇಳದೆ ಊರನ್ನೆ ಬಿಟ್ಟು ಹೋಗುತ್ತನೆ. ನಂತರ ದಿನಗಳಲ್ಲಿ ಮಲ್ಲೇಗೌಡನ ಕನಸ್ಸಿನಲ್ಲಿ ಒಂದು ಆಗೋಚರವಾದ ಶಕ್ತಿ ಅವನ ಕಿರುಬೆರಳು, ಹೆಂಡತಿ, ಮಕ್ಕಳನ್ನು ಹಾರವಾಗಿ ಕೇಳಿದಾಗ, ಇದಕ್ಕೆ ಒಪ್ಪದೆ ತನ್ನ ಮಗನ ಹೆಂಡತಿಯನ್ನು ಹಾರವಾಗಿ ಕೋಡಲು ಒಪ್ಪಿದ ನಂತರ ಹೊನ್ನಮ್ಮ ಈ ಮಾತನು ಕೇಳಿ ಗ್ರಾಮದ ಜನರ ಒಳಿತಿಗೆ ಕೆರೆಗೆ ಹಾರಿ ಆಹುತಿಯಾಗುತ್ತಾಳೆ.[೩೨] ಅಂದಿನಿಂದ ಅಣಜಿ ಕೆರೆಗೆ ಕೆರೆಹೊನ್ನಮ್ಮ ಎಂದು ಹೆಸರು ಬಂದಿದೆ. ಹಾಗೆಯೇ ಈ ಕೆರೆಯ ಏರಿಯ ಮೇಲೆ ಶಿವಶರಣೆ ದೇವಾಸ್ಥಾನವು ಕೂಡ ಇರುವುದರಿಂದ ಹೊನ್ನಮ್ಮ ದೇವತೆಯಾಗಿ ದಿನನಿತ್ಯ ಪೂಜೆಯನ್ನು ಈ ಗ್ರಾಮದ ಜನರು ಮಾಡಿಕೊಂಡು ಬರುತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಬೇಸಿಗೆ ಮುನ್ನವೇ ಬತ್ತುವ ನದಿ, ನೀರಿಗೆ ಹಾಹಾಕಾರ, ಟ್ಯಾಂಕರ್ ನೀರು ಪಡೆಯಲು ಮಹಿಳೆಯರ ಪರದಾಟ, ಜನಪ್ರತಿನಿಧಿಗಳ ಹಾಗೂ ಅಧಿಕಾರಿಗಳ ದೂರದೃಷ್ಟಿ ಕೊರತೆಯು ಎಂದ್ದು ಕಾಣುತ್ತದೆ. ನೀರಿನ ಸಂಗ್ರಹಣೆಗೆ ಶಾಶ್ವತ ಪರಿಹಾರದಂತಹ ಸೌಲಭ್ಯಗಳನ್ನು ಹೊಂದಿರುವ ಅಗಸನಕಟ್ಟೆ ಕೆರೆ, ಅಭಿವೃದ್ಧಿ ಪಡಿಸಬೇಕಾಗಿದೆ. ಹರಿಹರದ ಗಡಿ ಭಾಗದಲ್ಲಿರುವ ಅಗಸನಕಟ್ಟೆಯು ದಾವಣಗೆರೆ ತಾಲೂಕು ವ್ಯಾಪ್ತಿಗೆ ಸೇರಿದೆ. ಸುಮಾರು ೩೨ ಎಕರೆ ವಿಸ್ತಾರವಿದ್ದು, ಕುಡಿಯುವ ನೀರು ಸಂಗ್ರಹಣೆ ಯೋಗ್ಯವಾಗಿದೆ. ಮಳೆಗಾಲದಲ್ಲಿ ಜಿಲ್ಲೆಯ ೨೨ ಕೆರೆಗಳಿಗೆ ನೀರು ಹರಿಸುವ ತುಂಗಭದ್ರೆಯ ನೀರು ಬೇಸಿಗೆಯಲ್ಲಿ ನೀರಿನ ಹರಿವಿನ ಕೊರತೆಯನ್ನು ಎದುರಿಸುತ್ತದೆ. ದಾವಣಗೆರೆ ಕಸಬಾ ಪರಿಸರ ಕುಡಿಯುವ ನೀರಿನ ಕೊರತೆ ಎದುರಿಸುತ್ತದೆ. ಹೀಗಾಗಿ ಕೊಳವೆ ಬಾವಿಗಳೇ ನೀರಿನ ಪೂರೈಕೆಯ ಮೂಲಗಳಾಗಿವೆ. ದಾವಣಗೆರೆ ಜಿಲ್ಲೆಯ ಬೆಳವಣಿಗೆ ಮತ್ತು ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ನೀರಿನ ವ್ಯವಸ್ಥೆ ಆಗಬೇಕಾಗಿದೆ. ಅಗಸನಕಟ್ಟೆ ಕೆರೆಯ ಅಭಿವೃದ್ಧಿಯಿಂದ ಹರಿಹರ ಮತ್ತು ದಾವಣಗೆರೆ ಪರಿಸರದ ಜನರಿಗೆ ಕುಡಿಯುವ ನೀರು ಮತ್ತು ರೈತರಿಗೆ ಕೃಷಿಗೆ ನೀರನ್ನು ದೊರೆಯುವಂತ ಕಾರ್ಯ ತ್ವರಿತವಾಗಿ ನಡೆಯಬೇಕಾಗಿದೆ.

**ಅಡಿ ಟಿಪ್ಪಣಿಗಳು**

೦೧. ಅಪರ್ಣ ಕೂ.ಸ., ೧೯೯೯, ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ.೧

೦೨. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪುಟ.೨೮೪

೦೩. ರಾಜರಾಂ ಹೆಗಡೆ., ೧೯೯೨, ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯ ಐತಿಹಾಸಿಕ ವಿಶ್ಲೇಷಣೆ. ಪುಟ. ೩೫-೩೬

೦೪. ಗೋಪಾಲ್ ಬಾ.ರಾ., ವಾಸ್ತುವಿದ್ಯಾ ಶಿಲ್ಪಶಾಸ್ತ್ರ, ಪುಟ.೧

೦೫. ಪ್ರಭಾಕರ್ ಎಂ.ಎಸ್., ದೇವಾಲಯ ವಾಸ್ತು, ಪುಟ.೧೨

೦೬. ರಾಮಚಂದ್ರರಾವ್ ಎಸ್.ಕೆ., ಭಾರತೀಯ ದೇವಾಲಯಗಳು ನೆಲೆ-ಹಿನ್ನೆಲೆ, ಪುಟ.೧

೦೭. ತಿಪ್ಪೇರುದ್ರಸ್ವಾಮಿ ಎಚ್., ೧೯೮೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ.೫೨೪

೦೮. ಸುರೇಶ ಬಿ., ೨೦೦೯, ಚಿತ್ರದುರ್ಗ-ದಾವಣಗೆರೆ ದೇವಾಲಯಗಳು, ಪುಟ.೧೨೪

೦೯. ಅದೇ, ಪುಟ.೧೨೫

೧೦. ಅದೇ, ಪುಟ.೧೨೭

೧೧. ಅದೇ ಪುಟ.೧೨೮-೧೨೯

೧೨. ತಿಪ್ಪೇಸ್ವಾಮಿ ಎಚ್., ೨೦೦೦, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪುಟ.೮೩-೮೪

೧೩. ಅದೇ, ಪುಟ.೮೪

೧೪. ಅದೇ, ಪುಟ.೮೪

೧೫. ಗಿರಿಜಾ ಟಿ., ೨೦೦೧, ದಾವಣಗೆರೆ: ಇದು ನಮ್ಮ ಜಿಲ್ಲೆ, ಪುಟ.೩೨೩

೧೬. ಅದೇ, ಪುಟ.೩೨೪

೧೭. ಅದೇ, ಪುಟ. ಶಾ,ಸಂ,೬

೧೮. ಜ್ಞಾನಾನಂದ ಜಿ, ಶಿಲ್ಪದರ್ಶನ ಸಂ.೧. ಪುಟ.೩

೧೯. ಅದೇ ಪುಟ.೪-೫

೨೦. ರಾಮಚಂದ್ರರಾವ್ ಸಾ.ಕೃ., ಸಂಪ್ರದಾಯ ಶಿಲ್ಪಕಲೆ, ಶಿಲ್ಪಕಲಾ ಪ್ರಪಂಚ, ತಿಪ್ಪೇಸ್ವಾಮೀ ಸಿ.ಆರ್. (ಪ.ಸಂ). ಪುಟ.೩೫

೨೧. ಅದೇ, ಪುಟ.೩೬-೩೭

೨೨. ಗಿರಿಜಾ ಟಿ., ಪೂರ್ವೋಕ್ತ, ಪುಟ.೩೬೩

೨೩. ತಿಪ್ಪೇರುದ್ರಸ್ವಾಮಿ ಎಚ್., ೧೯೮೫, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ.೫-೨೩

೨೪. ತಿಪ್ಪೇಸ್ವಾಮಿ.ಎಚ್., ಪೂರ್ವೋಕ್ತ, ಪುಟ.೨೨೩

೨೫. ಅದೇ, ಪುಟ.೨೨೬-೨೨೭

೨೬. ಅದೇ, ಪುಟ.೨೩೨-೨೩೩

೨೭. ಆಂಜನೇಯ ಸ್ವಾಮಿ ಡಿ.ಕೆ., ೨೦೧೫, ದಾವಣಗೆರೆ ಜಿಲ್ಲೆಯ ಪ್ರಾಚೀನ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ, ಪುಟ.೧೯

೨೮. ಅದೇ, ಪುಟ.೧೬

೨೯. ಅದೇ, ಪುಟ.೨೩

೩೦. ಅದೇ, ಪುಟ.೨೪-೨೫

***

# ಅಧ್ಯಾಯ : ನಾಲ್ಕು

---

## ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು

೪.೧ ಆಡಳಿತ ವ್ಯವಸ್ಥೆ

೪.೨ ಸಾಮಾಜಿಕ ವ್ಯವಸ್ಥೆ

೪.೩ ಧಾರ್ಮಿಕ ವ್ಯವಸ್ಥೆ

೪.೪ ಆರ್ಥಿಕ ವ್ಯವಸ್ಥ

# ಶಾಸನಗಳು ಮತ್ತು ಸ್ಮಾರಕ ಶಿಲ್ಪಗಳು

## ಶಾಸನಗಳು

ಯಾವುದೇ ಒಂದು ಸ್ಥಳೀಯ ಪ್ರದೇಶದ ಪಾರಂಪರಿಕ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತದೆ. ಶಾಸನಗಳ ಕ್ರಮಬದ್ಧವಾದ ಅಧ್ಯಯನ ಶಾಖೆಗೆ ಶಾಸನಶಾಸ್ತ್ರ ಎಂದು ಕರೆಯಲಾಗಿದೆ. ಪ್ರಸಿದ್ಧ ಶಾಸನತಜ್ಞ ಡಿ.ಸಿ. ಸರ್ಕಾರ್ ಅವರ ಒಂದಡೆ ಹೇಳಿರುವಂತೆ ಭಾರತದ ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸದ ನಮ್ಮ ೮೦ ಪ್ರತಿಶತ ಜ್ಞಾನ ಶಾಸನ ಆಕರಗಳನ್ನೇ ಅವಲಂಬಿಸಿದೆ. ರಾಜಕೀಯ ಇತಿಹಾಸಕ್ಕೆ ಅಲ್ಲದೇ ಕಲೆ, ಸಾಹಿತ್ಯ, ಧರ್ಮ, ಭಾಷೆ ಮುಂತಾದ ಸಾಂಸ್ಕೃತಿಕ ಅಂಶಗಳ ಕುರಿತು ಭೌಗೋಳಿಕ ಮತ್ತು ಕಾಲಮಾನದ ಚೌಕಟ್ಟಿನಲ್ಲಿ ಇತಿಹಾಸವನ್ನು ರಚಿಸುವ ನಿಟ್ಟಿನಲ್ಲಿ ಶಾಸನಗಳ ಪಾತ್ರ ಹಿರಿದಾದುದು.[೧] ಶಾಸನ ಎಂಬ ಸಂಸ್ಕೃತ ಪದಕ್ಕೆ 'ಆಜ್ಞೆ' (ರಾಜಾಜ್ಞೆ) ಎಂಬುದು ಮೂಲಾರ್ಥ, ಶಾಸ್ ಎಂಬ ಧಾತುವಿನಿಂದ ಬಂದದ್ದು 'ಶಾಸನ' 'ಶಾಸ್' ಧಾತುವಿಗೆ ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥಗಳಿವೆ. ಶಾಸನ ಎಂಬುದು ಮೂಲತಃ ದಾನ ಸಂಬಂಧವಾದ ರಾಜಾಜ್ಞೆಯಾಗಿದೆ. ಜೆ.ಎಫ್.ಫ್ಲೀಟ್ ಅವರು ಹೇಳುವಂತೆ ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣವಾಗಿದೆ. ಸಾಧಾರಣವಾಗಿ ಸಂಕೀರ್ಣವಾದ ಸಂಗತಿಗಳನ್ನು ಸಾರುವ, ದಿನಾಂಕವಿರುವ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳು ಬೇಕೆಂದು ಪ್ರಕಟಣೆಗಳಲ್ಲಿವೆ,[೨]

ಶಾಸನಗಳು ಎಂದರೆ ರಾಜರ ಆಜ್ಞೆಗಳನ್ನು ತಿಳಿಸುವ ಬರಹಗಳು ಎಂದು ಸೂಚಿಸುತ್ತದೆ ಎಂದು ಕೌಟಿಲ್ಯನು ಹೇಳಿದ್ದಾನೆ, ಮೂಲತಃ ರಾಜಾಜ್ಞೆಗಳು ಅಥವಾ ಶಾಸನಗಳು ತಾಳಪತ್ರದ ಮೇಲಿರುತ್ತಿದ್ದಾವೆಂದು ತಿಳಿದುಬರುತ್ತದೆ. ಅವುಗಳನ್ನು ಶಾಶ್ವತಗೊಳಿಸುವುದಕ್ಕಾಗಿ ತಾಮ್ರಪಟಗಳ ಮೇಲೂ, ಕಲ್ಲಿನ ಮೇಲೂ ಕೊರೆದರು, ರಾಜಾಜ್ಞೆ ಎಂಬ ಮೂಲಾರ್ಥ ಕ್ರಮೇಣ ವಿಸ್ತಾರವಾಗಿ ಕಾಣುತ್ತೇವೆ. ಹಿಂದೆ ದಾನ ಶಾಸನಗಳ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ದೇವಾಲಯಗಳಿಗೆ, ಮಠಮಾನ್ಯಗಳಿಗೆ, ಆಗ್ರಹಾರಗಳಿಗೆ, ಬ್ರಾಹ್ಮಣ ಪುರೋಹಿತರಿಗೆ ದಾನಗಳನ್ನು ನೀಡುವುದು ಹೆಚ್ಚಾಯಿತು. ಮುಂದೆ ಅದರಲ್ಲಿ ರಾಜನಿಂದ ಪಡೆದ ದಾನ ಧರ್ಮದ ವಿಷಯಗಳನ್ನು ದಾನ ಪಡೆದಿರುವ ವ್ಯಕ್ತಿ ತಮ್ಮ ಜಮೀನಿನ ಹೊಲದ ಬದುಗಳಲ್ಲಿ ಕಲ್ಲಿನಲ್ಲಿ ಕೆತ್ತಿಸಿ ನೆಡುತ್ತಿದ್ದರು. ಪ್ರತಿಯೊಂದು ಶಾಸನವು ಧರ್ಮಸೂತ್ರಗಳಿಂದ ಪ್ರಾರಂಭಗೊಳ್ಳುತ್ತವೆ. ಶಾಸನಗಳಲ್ಲಿ ಸೂರ್ಯ, ಚಂದ್ರರ ಚಿತ್ರಗಳು ಕಂಡುಬರುತ್ತದೆ. ಅಂದರೆ ಕೊಟ್ಟಿರುವ ದಾನವು ಸೂರ್ಯ, ಚಂದ್ರರು ಇರುವ

ತನಕ ಇರಲಿ ಎಂಬ ಉದ್ದೇಶವಾಗಿತ್ತು. ಶಾಸನಗಳಲ್ಲಿ ಶಿಲಾಶಾಸನಗಳು, ತಾಮ್ರಶಾಸನಗಳು, ಸ್ತಂಭಶಾಸನಗಳು, ಗುಹಾಶಾಸನಗಳು, ವೀರಮಾಸ್ತಿಗಲ್ಲುಗಳು, ನಿಷಿಧಿಕಲ್ಲುಗಳು ಕಾಣಬಹುದು.[೩] ಕಾಲನಂತರದಲ್ಲಿ ಶಾಸನಗಳಲ್ಲಿ ಮಹತ್ವ ಹೆಚ್ಚಿದಂತೆ ಧರ್ಮದ ಲೇಪನ ಮಾಡಲಾಯಿತು. ಅಶೋಕನು ತಾನು ಹಾಕಿಸಿದ ಶಾಸನಗಳನ್ನು ಧರ್ಮಶಾಸನ ಲಿಪಿಗಳೆಂದು ಕರೆದುಕೊಂಡಿದ್ದಾನೆ. ಶಾಸನ ಎಂದರೆ ಕೆತ್ತನೆ, ಕೊರೆ, ಕಂಡರಿಸು ಎಂಬ ಅರ್ಥಕ್ಕೆ ಬದಲಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಒಪ್ಪಂದ, ಕಾರಾರು ಎಂಬ ವ್ಯಾಪಾಕ ಅರ್ಥವನ್ನು ಶಾಸನ ಪಡೆದುಕೊಂಡಿತು.[೪]

**ಸ್ಮಾರಕ ಶಿಲ್ಪಗಳು**

ಕನ್ನಡಿಗರು ಧಾರ್ಮಿಕ ನೆಲೆಗಟ್ಟಿನಿಂದಲೇ ಪ್ರಭಾವಿತಗೊಂಡಿದ್ದು, ಪ್ರಾಚೀನ ಕಾಲದಿಂದಲೂ ಮೋಕ್ಷ ಸಂಪಾದಿಸುವುದೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಬದುಕುತ್ತಿದ್ದಾರೆ. ಇದಕ್ಕೆ ಅತ್ಮನು ಸಂಧಾನ, ಆದರ್ಶನುಸಂಧಾನ ಮತ್ತು ಮೌಲ್ಯಾನುಸಂಧಾನದಿಂದ ಸಾಧನಗಳನ್ನಾಗಿ ಪರಿಭಾವಿಸಿಕೊಂಡಿದ್ದಾರೆ. ಅತ್ಮಾನುಸಂಧಾನದಿಂದ ಸಮಾದೀಕರಣ, ಮೌಲ್ಯಾನು ಸಂಧಾನದಿಂದ ಬಲಿದಾನ, ಸದ್ಗತಿ ಮತ್ತು ವೀರ ಮರಣ ಇವು ಸಮಾಜದ ರೂಢಿಸಿ ಬೆಳಸಿಕೊಂಡು ಬಂದಿರುವ ಆಚರಣೆಗಳಾಗಿವೆ. ಇಂತಹ ಅಸಾಮಾನ್ಯ ವಿಶಿಷ್ಟ ಮರಣಗಳು ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿದನ್ನು ಗುರುತಿಸಬಹುದಾಗಿದ್ದು, ಇದರ ನೆನಪಿಗಾಗಿ ವೀರರ ಗುಡಿಗಳನ್ನು ನಿರ್ಮಿಸುವ, ಹಾಗೆಯೇ ಮಹಾಸತಿಗಲ್ಲು, ನಿಷಿಧಿಗಲ್ಲುಗಳನ್ನು ಪ್ರತಿಷ್ಠಾಪಿಸುವ ಪದ್ಧತಿಯು ಪರಂಪರೆಯಾಗಿ ಬೆಳೆದು ಬಂದಿರುತ್ತದೆ.[೫]

**ದಾನ ಶಾಸನಗಳು**

೧. ಊರು – ಚಿಕ್ಕಬೂದಾಳು
ಹೋಬಳಿ – ದಾವಣಗೆರೆ (ಕಸಬಾ)
ಸ್ಥಳ – ಗ್ರಾಮದ ಆಂಜನೇಯ ದೇವಾಲಯ
ಕಾಲ – ಕ್ರಿ.ಶ. ೧೦೪೦
ಭಾಷೆ ಮತ್ತು ಲಿಪಿ – ಕನ್ನಡ

ಶಾಸನ ಪಾಠದ ಸಾರಾಂಶ :

ದಾವಣಗೆರೆಯಿಂದ ಸಮೀಪ ದೂರದಲ್ಲಿರುವ ಗ್ರಾಮ ಚಿಕ್ಕಬೂದಾಳು ಆಗಿದೆ. ಈ ಗ್ರಾಮದ ಆಂಜನೇಯ ದೇವಾಲಯದ ಬಳಿಯ ಶಾಸನದಿಂದ ಕ್ರಿ.ಶ. ೧೦೪೦ರ ವಿಳಂಬೀ ಸಂವತ್ಸರ ಮಾಘ ಶುದ್ಧ ಬೆಳಗಾವಿ ರಾಮನಾಯಕರ ಪುತ್ರರಾದ ರಂಗಪ್ಪನಾಯಕರ ಪುತ್ರರಾದ ರಾಮಣ್ಣನಾಯಕರಿಗೆ

ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕರು ಚಿಕ್ಕ ಬೂದಿಹಾಳ ಗ್ರಾಮವನ್ನು ಅಗ್ರಹಾರವನ್ನಾಗಿ ದಾನಕೊಟ್ಟ ವಿಚಾರ ತಿಳಿಯುತ್ತದೆ.[೬]

೨. ಊರು – ಬೆಳವನೂರು

ಹೋಬಳಿ – ದಾವಣಗೆರೆ (ಕಸಬಾ)

ಸ್ಥಳ – ಬಸವೇಶ್ವರ ದೇವಸ್ಥಾನದ ಪಕ್ಕ

ಕಾಲ – ಕ್ರಿ.ಶ. ೧೦೪೫

ಭಾಷೆ ಮತ್ತು ಲಿಪಿ – ಕನ್ನಡ

ಶಾಸನ ಪಾಠದ ಸಾರಾಂಶ :

ಈ ಗ್ರಾಮ ಹಿಂದೆ ಕದಂಬರಿಗೂ, ಚಾಳುಕ್ಯರಿಗೂ, ನೊಳಂಬರಿಗೂ ಈ ಗ್ರಾಮ ಸೇರಿತ್ತು. ಶ.ವ. ೯೬೬ (೧೦೪೪) ರಲ್ಲಿ ಮೂರನಮಯ್ಯನು ಬೆಳವನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದನು. ಬೆಳವನೂರಿನ ಮೂಲ ಸ್ಥಾನದ ಕಲಿದೇವರಿಗೆ ಭೂಮಿ ಗದ್ದೆಗಳನ್ನು ದತ್ತಿ ನೀಡಿದ ಬಗ್ಗೆ ಈ ಶಾಸನದಲ್ಲಿ ತಿಳಿಸುತ್ತದೆ ಹಾಗೂ ಕ್ರಿ.ಶ. ೧೦೪೫ರಲ್ಲಿ ದಾವಣಗೆರೆ ೩೦ನೇ ಶಾಸನದಿಂದ ನಾಗಯ್ಯನಾಯ್ಕ ಎಂಬುವ ನೊಳಂಬ ತ್ರೈಲೋಕ್ಯಮಲ್ಲನ ಸಾಮಂತನಾಗಿ ಶೌರ್ಯ, ಸದ್ಗುಣಗಳಿಂದ, ಸತ್ಪಾತ್ರರಿಗೆ ದಾನ ಮಾಡುತ್ತಾ ಈ ಬೆಳವನೂರು ಆಳಿದನೆಂದು ಶಾಸನದಲ್ಲಿ ವ್ಯಾಕ್ಯವಿದೆ.

೩. ಊರು – ಮುದಹದಡಿ

ಹೋಬಳಿ – ದಾವಣಗೆರೆ (ಕಸಬಾ)

ಸ್ಥಳ – ಈಶ್ವರ ದೇವಾಲಯದ ದಕ್ಷಿಣದಿಕ್ಕಿನಲ್ಲಿದೆ

ಕಾಲ – ಕ್ರಿ.ಶ. ೧೦೩೬–೩೭

ಭಾಷೆ ಮತ್ತು ಲಿಪಿ – ಕನ್ನಡ

ಶಾಸನ ಪಾಠದ ಸಾರಾಂಶ :

ದಾವಣಗೆರೆಯಿಂದ ಶಿವಮೊಗ್ಗ ಕಡೆಗೆ ಹೋಗುವ ಮಧ್ಯದಲ್ಲಿರುವ ಈ ಗ್ರಾಮ ಹದಡಿ ಬರುತ್ತದೆ. ಈ ಗ್ರಾಮವು ಶಾಸನಸ್ಥ ಗ್ರಾಮವಾಗಿದೆ. ಕ್ರಿ.ಶ. ೧೦೩೬–೩೭ ಕಾಲದ ಇಲ್ಲಿಯ ದೇವಾಲಯದ ದಕ್ಷಿಣ ದಿಕ್ಕಿನಲ್ಲಿರುವ ಶಾಸನದಿಂದ (ದಾವಣಗೆರೆಯ ೧೨೬ನೇ ಶಾಸನ) ಪಲ್ಲವ ಕಾಳಾಭರಣ ಬ್ರಹ್ಮಾದಿರಾಜ ಜಗದೇಕಮಲ್ಲನು ಇಮ್ಮಡಿ ನೊಳಂಬ ಪೆರ್ಮಾಡಿಯ ಪ್ರಧಾನಿಯಾಗಿದ್ದನೆಂದು, ಕದಂಬಳಿಗೆ ೧೦೦೦, ಕೋಗಳಿ ೫೦೦, ಬಲ್ಲಕುಂಟೆ ೩೦೦, ಕುಡಿಯುಪರಸೆಯ ಈಶ್ವರ ಸಂವತ್ಸರದ ಉತ್ತರಾಯಣ ಸಂಕ್ರಾಂತಿ ಅಧಿತ್ಯವಾರದಂದು ಬ್ರಹ್ಮವೇಧಿ

ಜೇಯರ ಕಾಲಂಕುರ್ಚಿ ಮುದಹದಡಿಯ ಬ್ರಹ್ಮೇಶ್ವರ ದೇವರಿಗೆ ಗದ್ದೆ ಬೆದ್ದಲು ಭೂಮಿಯನ್ನು ದಾನಕೊಟ್ಟ ವಿಚಾರ ತಿಳಿಯಬಹುದಾಗಿದೆ.[೭]

೪. ಊರು – ವೊಡ್ಡಿನಹಳ್ಳಿ

ಹೋಬಳಿ – ದಾವಣಗೆರೆ (ಕಸಬಾ)

ಸ್ಥಳ – ಗಿರಿಮಲ್ಲಪ್ಪನ ಹೊಲದಲ್ಲಿ

ಕಾಲ – ಕ್ರಿ.ಶ. ೧೦೪೪–೪೫

ಭಾಷೆ ಮತ್ತು ಲಿಪಿ – ಕನ್ನಡ

ಶಾಸನ ಪಾಠದ ಸಾರಾಂಶ :

ವೊಡ್ಡಿನಹಳ್ಳಿ ಸರಿಯಾದ ಹೆಸರು ಈ ಗ್ರಾಮ ಶಾಸನಸ್ಥ ಗ್ರಾಮವಾಗಿದೆ. ಈ ಗ್ರಾಮದ ಅಣ್ಣೆಯದಲ್ಲಿರುವ ಗಿರಿಮಲ್ಲಪ್ಪನ ಹೊಲದ ತೆವರಿನಲ್ಲಿರುವ ಶಾಸನದಿಂದ ನೊಳಂಬ ಪಲ್ಲವ ಪೆರ್ಮಾಡಿದೇವನು ಕೋಗಳಿ ೫೦೦, ಕದಂಬಳಿಗೆ ೧೦೦೦, ಬಲ್ಲರುಂದೇ ೨೦೦, ಕಣಿಯ ಕಲ್ಮನೂರು, ಕುಡಿಯಾರವಿ ಉಪ್ಪತ್ತು, ಕದಿವಿಡಿ ೨೦ ಈ ಪ್ರದೇಶಗಳಿಗೆ ಸುಖದಿಂದ ಆಳುತ್ತಾ ಇರುವಾಗ ಇವರ ಪಾದಪದ್ಮೋಪಜೀವಿ...... ಸಾಮಂತ ಬೇತೂರು ೧೨ರ ಅದಾಯದ ಬೆಳವನು ಆಳುತ್ತಾ, ಸಮಸ್ತಧರ್ಮ, ರಾಮಚರಣ ಸರಣ ಪರಿಣಿತಂ ಗಜಕೇಸರಿ ಎನ್ನುವ ಬಿರುದು ಹೊಂದಿ ನಾಗಯ್ಯನಾಯ್ಕನ್ನು ಸದ್ಗುಣಿಯಾಗಿ ದಾನಧರ್ಮ ನೀಡುತ್ತಿದ್ದಾನೆಂದು ತಿಳಿಸುತ್ತದೆ.[೮]

ವೀರಗಲ್ಲು

'ವೀರ' ಎಂದರೆ ಶೌರ್ಯದಿಂದ ಕೂಡಿದ ಪೌರುಷದ, ಶೂರನಾದ, ಪರಾಕ್ರಮಿಯಾದ, ಬಲಿಷ್ಠಯಾದ, ಶಕ್ತಿಯುತನಾದ, ಶ್ರೇಷ್ಠನಾದ, ಉತ್ತಮವಾದ ಎಂಬ ವಿವಿಧ ಹೆಸರುಗಳಿವೆ, ಕಲಿ, ಶೂರ, ಶೌರ್ಯ, ಕಲಿತನ, ನಟ, ಪಾತ್ರದಾರಿ, ಬೆಂಕಿ, ಮಗ, ಗಂಡ, ಜಿನಾ, ವಿಷ್ಣು, ವೀರಭದ್ರ, ಎಂಬ ಕನ್ನಡ ಶಬ್ದಕೋಶದಲ್ಲಿ ತಿಳಿಸಲಾಗಿದೆ 'ವೀರ' ಎಂಬ ಪದವು ಮೂಲತಃ ಸಂಸ್ಕೃತ ಭಾಷೆಯಿಂದ ಬಂದಿದೆ. ನೇರವಾಗಿ ಕನ್ನಡ ಮತ್ತು ಇತರೆ ಭಾಷೆಗಳಲ್ಲಿಯೂ ಈ ಪದವು ತನ್ನ ಮೂಲಾರ್ಥವನ್ನು ಉಳಿಸಿಕೊಂಡು ಬಂದಿದೆ. 'ವೀರ' ನ ಕುರಿತು ಮಹಾಭಾರತದಲ್ಲಿ ಉಲ್ಲೇಖ ಕಂಡು ಬರುತ್ತದೆ. ಯುದ್ಧಭೂಮಿಯಲ್ಲಿ ಹೋರಾಡುತ್ತಾ ಕೊನೆಯುಸಿರೆಳೆದ ಸೈನಿಕ ಸಾವನ್ನು 'ವೀರಮರಣ' ವೆಂದೂ, ಈ ಮರಣದ ಮೂಲಕ ಸಿಗುವ ಇಂತಹ ಸದ್ಗತಿಯನ್ನು ವೀರ ಮರಣ ಎಂದು ಕರೆಯುತ್ತಾರೆ.[೯] ಉದಾಹರಣೆಗೆ ಇಂದಿನ ದಿನಗಳಲ್ಲಿ ಉಳಿದು ಬಂದಿರುವ ವೀರಗಲ್ಲುಗಳೇ ಪ್ರಮುಖ ಸಾಕ್ಷಿಯಾಗಿದೆ.

ಯುದ್ಧದಲ್ಲಿ ಪ್ರಾಣಾರ್ಪಣೆ ಮಾಡಿಕೊಂಡ ವೀರನ ನೆನಪಿಗೆ ವೀರಗಲ್ಲನ್ನು ನೆಡುವ ಪದ್ಧತಿಯಿತ್ತು. ಯುದ್ಧ, ಬೇಟೆ, ಗೋಗ್ರಹಣ, ಮಹಿಳೆಯರ ಮಾನರಕ್ಷಣೆ ಹೀಗೆ ನಾನಾ ಕಾರಣಗಳಿಂದ ಮಡಿದ ವೀರನಿಗಾಗಿ ವೀರಗಲ್ಲುಗಳನ್ನು ಕೆತ್ತಿಸಿರುವುದನ್ನು ನೋಡಬಹುದಾಗಿದೆ. ಇಂತವರಿಗಾಗಿ ವೀರಗಾಣಿಕೆ ಇತ್ತು. ಸತ್ತ ಮೇಲೆ ಮಾತ್ರವಲ್ಲ ಬದುಕಿರುವಾಗಲೇ ಅನೇಕ ಶೂರರ ಹೆಸರುಗಳು ಜನರ ನಾಲಗೆಯ ಮೇಲೆ ನಲಿಯುತ್ತಿದ್ದವು. ಯುದ್ಧದಲ್ಲಿ ಸತ್ತರೆ ಪರಲೋಕದಲ್ಲಿ ಸುಖಿಸಬಹುದು ಎಂದು ಜನರು ನಂಬಿದರು. ಅ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದ ಕನ್ಯೆಯರು ಕಾದು ಕೊಂಡಿರುತ್ತಿದ್ದರಂತೆ ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯ ನಡೆಯುತ್ತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೋ ಶಿವನೋಲಗಕ್ಕೊಕೊಂಡುಯುತ್ತಾರೆ ಎಂದು ಜನರು ನಂಬಿದ್ದನ್ನು ವೀರಗಲ್ಲುಗಳ ಮೇಲಿನ ಕೆತ್ತನೆಗಳಿಂದ ಒಪ್ಪಬಹುದಾಗಿದೆ.

ವೀರಗಲ್ಲುಗಳ ಸ್ವರೂಪ ಮತ್ತು ಲಕ್ಷಣಗಳ ದೃಷ್ಟಿಕೋನಗಳು ಅವುಗಳನ್ನು ಏಳು ರೀತಿಯಲ್ಲಿ ವರ್ಗೀಕರಿಸಬಹುದು ಅವುಗಳೆಂದರೆ.

೧. ತುರುಗೋಳ್

೨. ಪೆಣ್ಬುಯ್ಯಲ್

೩. ರಾಜನ ಪರವಾಗಿ ಹೋರಾಡಿ ಮಡಿದವರ ವೀರಗಲ್ಲುಗಳು

೪. ಕಳ್ಳರೊಡನೆ ಹೋರಾಡಿ ಮಡಿದವರ ವೀರಗಲ್ಲುಗಳು

೫. ವ್ಯಕ್ತಿ – ಪ್ರಾಣಿಗಳ ನಡುವಿನ ಹೋರಾಡಿದ ವೀರಗಲ್ಲುಗಳು

೬. ಪ್ರಾಣಿ – ಪ್ರಾಣಿಗಳ ನಡುವಿನ ಹೋರಾಡಿದ ವೀರಗಲ್ಲುಗಳು

೭. ಇತರೆ ವೀರಗಲ್ಲುಗಳು

ದಾವಣಗೆರೆ ಕಸಬಾ ಪರಿಸರದಲ್ಲಿ ಕಾಣಿಸಿರುವ ಶಾಸನಗಳಂತೆ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು ಐತಿಹಾಸಿಕ ಅಂಶಗಳನ್ನು ಪ್ರತಿಬಿಂಬಿಸುವ ಜೊತೆಗೆ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಸುತ್ತದೆ. ಇಲ್ಲಿಯ ವೀರಗಲ್ಲುಗಳಿಂದ ದೊರೆಯುವ ಮಾಹಿತಿಯನ್ನು ವಿಶ್ಲೇಷಿಸುವುದರಿಂದ ಜನರ ಮನೋಧರ್ಮಗಳ ಪರಿಚಯ ಆಗುತ್ತದೆ. ಅದನ್ನು ಪ್ರತಿನಿಧಿಸುವ ವೀರನ ಹೋರಾಟದ ಬಗ್ಗೆ ಹಾಗೂ ಮಡಿದವನ ಜೀವನ ಮೌಲ್ಯಗಳನ್ನು ತಿಳಿಯಬಹುದು. ಈ ದೃಷ್ಟಿಯಿಂದ ವೀರಗಲ್ಲಿನ ಶಿಲ್ಪ ಮತ್ತು ಪಾಠ ಎರಡು ನಮಗೆ ನೆರವಾಗುತ್ತದೆ. ಈ ಪರಿಸರದಲ್ಲಿ ವಿವಿಧ ಬಗೆಯ ವೀರಗಲ್ಲುಗಳು ದೊರೆತಿರುವುದು ಸಾಕ್ಷಿಯಾಗಿದೆ.

**ತುರುಗೋಳ್ :** 'ಗೋವು' ಪ್ರಾಚೀನ ಜನರಿಗೆ ವಿನಿಮಯದ ಪ್ರಧಾನ ವಸ್ತುವಾಗಿತ್ತು ಅಂದು ಒಂದು ಗೋವಿನ ಬೆಲೆ ಪರಮೋಚ್ಚ ನಾಣ್ಯವಾದ ಒಂದು ಸುವರ್ಣಕ್ಕೆ ಸಮಾನವಾಗಿದೆ. ಈ ಕಾರಣದಿಂದಲೇ ಸಂಪತ್ತಿನ ಸಾಲಿನಲ್ಲಿ 'ಗೋಧನ' ವೂ ಪರಿಗಣಿತವಾಯಿತು. ಎರಡು ಕಾರಣಗಳಿಂದ ತುರುಗಾಳಗವು ಮಹತ್ವವನ್ನು ಪಡೆದುಕೊಂಡಿದೆ. ಮೊದಲನೆಯದಾಗಿ ಗೋವು ಪೂಜ್ಯವಾದದು ಎರಡನೆಯದಾಗಿ ಅದ ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನದ ಪ್ರಶ್ನೆಯೂ ಇದೆ. ತುರುಗೋಳ್ ಎಂದರೆ ದನಗಳನ್ನು ತೆಗೆದುಕೋ ಹಿಡಿದುಕೊ ಎಂದು ಅರ್ಥವಾಗಿದೆ.[೧೦]

**ಪೆಣ್ಣುಯ್ಯಲ್ :** ಯಾವುದೇ ವ್ಯಕ್ತಿ ಮಹಿಳೆಯರ ಮಾನ ಸಂರಕ್ಷಣೆಯ ಧಾವಿಸಿ ಶತ್ರುಗಳೊಂದಿಗೆ ಹೋರಾಡುತ್ತಿದ್ದನು. ಇಂತಹ ಸಂದರ್ಭಗಳಲ್ಲಿ ನಡೆಯುತ್ತಿದ್ದ ಯುದ್ಧವನ್ನು 'ಪೆಣ್ಬುಯ್ಯಲ್' ಎಂದು ಗುರುತಿಸಲಾಗಿದೆ. ಅಪಮಾನಿತ ಸ್ತ್ರೀಯರನ್ನು ಬಿಡಿಸಿಕೊಳ್ಳುವಲ್ಲಿ ನಡೆದ ಕಾಳಗದಲ್ಲಿ ಜಯಿಸಿದ ಅಥವಾ ಮಡಿದ ವೀರನನ್ನು ಪೆಣ್ಬುಯ್ಯಲಿನಲ್ಲಿ ಸತ್ತ ವೀರರು ಎಂದು ಕರೆಯುವುದು ವಾಡಿಕೆ, ಇಂತಹ ಘಟನೆಗಳು ಯಾವುದೇ ಸಮಯದಲ್ಲಿ ನಡೆದಿರಬಹುದು. ಯುದ್ಧ ಪ್ರಚೋದಕವಾಗಿಯೂ ಕೆಲವು ಸಾರಿ ಯುದ್ಧದ ಪರಿಣಾಮವಾಗಿಯೂ ಆಗುತ್ತಿದ್ದಂತೆ ಕಂಡು ಬರುತ್ತದೆ.

**ರಾಜನ ಪರವಾಡಿ ಹೋರಾಡಿ ಮಡಿದವರ ವೀರಗಲ್ಲುಗಳು :** ಪ್ರಾಚೀನ ಕಾಲದಲ್ಲಿ ಆಡಳಿತದ ವ್ಯವಸ್ಥೆಯಲ್ಲಿ ಯುದ್ಧವೆಂಬುದು ಅನಿವಾರ್ಯವಾದ ಘಟನೆಯಾಗಿತ್ತು. ಈ ಯುದ್ಧದಲ್ಲಿ ಹೋರಾಡುವವರನ್ನು ವೀರರೆಂದೂ, ಹೋರಾಟದಲ್ಲಿ ಸತ್ತವರನ್ನು ಸ್ವರ್ಗಕ್ಕೆ ಸಂದವರೆಂದೂ ಸಮಾಜ ನಂಬಿತ್ತು. ಯಾವುದೇ ಅಸೆ–ಅಮಿಷಗಳಿಗೆ ಒಳಗಾಗದೇ ಒಡೆಯನ ಅಥವಾ ಆಶ್ರಯದಾತನ ಋಣವನ್ನು ತೀರಿಸುವ ಸಲುವಾಗಿ ಆದರ್ಶದ ಬೆನ್ನುಹತ್ತಿ ಹೋರಾಡಿ ಮರಣಿಸುತ್ತಿದ್ದರು. ಒಡೆಯನಿಗಾಗಿ ಪ್ರಾಣ 'ಕೊಡುವುದೇ ನಮ್ಮ ಪರಮ ಕರ್ತವ್ಯವೆಂದು ನಂಬಿದ್ದ ವೀರರು ಸತ್ತ ನಂತರ ಅವರ ನೆನಪಿಗಾಗಿ ರಾಜನು ಇಲ್ಲವೇ ಊರಿನ ಮುಖಂಡರು ವೀರಗಲ್ಲುಗಳನ್ನು ನೆಡುತ್ತಿದ್ದರು.

**ವ್ಯಕ್ತಿ–ಪ್ರಾಣಿಗಳ ನಡುವಿನ ಹೋರಾಟದ ವೀರಗಲ್ಲು :** ಬೇಟೆ ಎನ್ನುವುದು ಮಾನವನ ಹುಟ್ಟಿನೊಂದಿಗೆ ಅವನ ಸಹಜ ಕ್ರಿಯೆಗಾಗಿ ಬೆಳೆದು ಬಂದಿದೆ. ಬೇಟೆಯಾಡುವುದು ಶೌರ್ಯದ ಸಂಕೇತವು ಹೌದು, ತಮ್ಮ ಪಶು ಸಂಪತ್ತಿನ ಮೇಲೆ ಅಥವಾ ಜನ ಸಮುದಾಯದ ಮೇಲೆ ಹಠಾತ್ತನೆ ಎರಗಿದ ಕಾಡಿನ ಮೃಗಗಳೊಂದಿಗೆ ನಡೆದ ಕಾದಾಟದಲ್ಲಿ ಮೃತನಾದ ವೀರನ ನೆನಪಿಗಾಗಿ ಸಿಡುವ ವೀರಗಲ್ಲುಗಳನ್ನು ಎಲ್ಲಾ ಕಡೆ ಕಂಡು ಬರುತ್ತವೆ. ಇವುಗಳು ಪ್ರಾಚೀನರ ವೀರ ಪರಂಪರೆಗೆ ಹಿಡಿದ ಕೈಗನ್ನಡಿಯಾಗಿದೆ. ಇವುಗಳನ್ನು ವ್ಯಕ್ತಿ– ಪ್ರಾಣಿಗಳ ನಡುವಿನ ಹೋರಾಟದ ವೀರಗಲ್ಲು ಎಂದು ವಿದ್ವಾಂಸರು ಗುರುತಿಸುತ್ತಾರೆ. ಬೇಟೆಯಲ್ಲಿ ಮರಣಿಸಿದ ವೀರಪುರುಷರ ನೆನಪಿನಲ್ಲಿ

ನೆಟ್ಟಿರುವ ಹಲವಾರು ವೀರಗಲ್ಲುಗಳಲ್ಲಿ ನಾಯಿಯ ಚಿತ್ರ ಇರುವುದನ್ನು ಕಾಣುತ್ತೇವೆ. ಇದು ಬೇಟೆಯಲ್ಲಿ ತನ್ನ ಬಡೆಯನಿಗೆ ಸಹಕರಿಸಿದುದನ್ನು ಪ್ರತಿಬಿಂಬಿಸುತ್ತದೆ.

**ಮಾಸ್ತಿಗಲ್ಲುಗಳು :** ಪತಿಯ ಮರಣಾನಂತರ ಅವನೊಡನೆ ಪ್ರಾಣತ್ಯಾಗ ಮಾಡುತ್ತಿದ್ದ ಸ್ತ್ರೀಯರನ್ನು 'ಮಹಾಸತಿ' ಎಂದು ಕರೆಯಲಾಗುತ್ತದೆ. ಮಹಾಸತಿಯ ಸಂಕ್ಷಿಪ್ತ ರೂಪವೇ ಮಾಸ್ತಿಯಾಗಿದೆ. ಮಸತಿ, ಸತಿ, ತೋಳ ಕಯೆಗೊಟ್ಟು, ಸಹಗಮನ, ಮಹಾಸತಿ, ಮಾಸ್ತಿ, ಸಹಗಮನವಂ ಮಾಡಿದ ಮಹಾಸತಿ ಎಂಬ ವಿವಿಧ ಹೆಸರುಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಧಾರ್ಮಿಕ ಮತ್ತು ಲೌಕಿಕ ಪರಂಪರೆಯ ಉದ್ದೇಶಗಳಿಂದ ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದರೆಂದು ದಾಖಲೆಗಳು ತಿಳಿಸುತ್ತವೆ. ಅಧ್ಯಯನ ಕ್ಷೇತ್ರವಾದ ದಾವಣಗೆರೆಯ ಪರಿಸರದಲ್ಲಿ ಹಲವಾರು ಮಾಸ್ತಿ ಕಲ್ಲುಗಳು ಕಂಡು ಬಂದಿವೆ.

**ವೀರ ಮಾಸ್ತಿಗಲ್ಲುಗಳು :** ವೀರ ಮಾಸ್ತಿಶಿಲ್ಪಗಳಲ್ಲಿ ವೀರನಿಗೆ ಹೆಚ್ಚು ಪಾಧಾನ್ಯವಿದ್ದು, ಮಹಾಸತಿ ಶಿಲ್ಪಕ್ಕೆ ಕಡಿಮೆ ಪ್ರಾಧಾನ್ಯತೆಯಿರುತ್ತದೆ. ಅಥವಾ ಇಬ್ಬರನ್ನು ಸರಿಸಮಾನವಾಗಿ ಚಿತ್ರಿಸಲಾಗಿರುತ್ತದೆ. ಈ ರೀತಿಯ ಮಹಾಸತಿ ಶಿಲ್ಪಗಳು ಬಹುತೇಕವಾಗಿ ಎಲ್ಲಾ ಕಡೆಯೂ ದೊರೆಯುತ್ತದೆ. ಇವುಗಳಲ್ಲಿ ಬರಹಗಳು ಇರುವುದಿಲ್ಲ. ಶಿಲ್ಪದ ಶೈಲಿಯ ಒರಟಾಗಿರುವುದು.

## ೪.೧ ಆಡಳಿತ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ವಿಶಾಲವಾದ ಸಾಮ್ರಾಜ್ಯವನ್ನು ಸಮರ್ಥವಾಗಿ ನಿರ್ವಹಿಸಲು ಮತ್ತು ಆಡಳಿತದ ಅನುಕೂಲತೆಗಾಗಿ ಈಗಿನ ರಾಜ್ಯ, ಜಿಲ್ಲೆ, ತಾಲೂಕು, ಹೋಬಳಿಗಳಂತೆ ಅನೇಕ ಘಟಕಗಳನ್ನಾಗಿ ವಿಂಗಡಿಸಲಾಗುತ್ತಿತ್ತು. ಕರ್ನಾಟಕವನ್ನಾಳಿದ ವಿವಿಧ ರಾಜಮನೆತನಗಳು ತಮ್ಮ ಆಡಳಿತಕ್ಕೆ ಅನುಕೂಲವಾಗುವಂತೆ ಭೌಗೋಳಿಕ ಪ್ರದೇಶವನ್ನು ವಾಡಿ, ವೇಂಟಿ, ನಾಡು, ಸೀಮೆ ಮುಂತಾದ ವಿಭಾಗಗಳನ್ನಾಗಿ ಮಾಡಿಕೊಂಡು ಆಳಿದ್ದಾರೆ. ಕೆಲವೊಮ್ಮೆ ಸ್ಥಳನಾಮದ ಜೊತೆಗೆ ಗ್ರಾಮ ಸೂಚಕ ಸಂಖ್ಯೆಗಳನ್ನು ಬಳಸಿರುವುದು ಕಂಡುಬರುತ್ತದೆ.[೧೧] ಉದಾ: ನೊಳಂಬವಾಡಿ ೩೨೦೦೦, ಗಂಗವಾಡಿ ೯೬೦೦೦, ಬನವಾಸಿ ೧೨೦೦೦ ಪ್ರಾಂತಗಳಿಗೆ ೭೦ ಕದಂಬಳಿಗೆ ಸಾಯಿರ, ಬಾಡ – ೨೪ ಇತ್ಯಾದಿ.

ಇದೇ ರೀತಿಯಾಗಿ ದಾವಣಗೆರೆ ಭೌಗೋಳಿಕ ಪ್ರದೇಶವು ಅನೇಕ ರಾಜಮನೆತನಗಳಿಗೆ ವಿವಿಧ ಕಾಲಘಟ್ಟದಲ್ಲಿ ವಿವಿಧ ಪ್ರಾಂತನಾಡು, ಸೀಮೆಯಾಗಿ ಆಳ್ವಿಕೆಗೆ ಒಳಪಟ್ಟಿತೆಂದು ಶಾಸನಗಳಿಂದ ತಿಳಿದು ಬರುತ್ತದೆ. ಪ್ರಾಚೀನ ಕಾಲದ ಆಡಳಿತ ಪದ್ಧತಿ ಮತ್ತು ಆಡಳಿತಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿ ಅಧಿಕಾರಿಗಳನ್ನು ಕುರಿತು 'ಆಳಖುತ್ತಮಿರೆ' ಎಂಬ ಶಬ್ದವನ್ನು ಬಳಸಿರುತ್ತಾರೆ. ಆಳುತ್ತಮಿರೆ ಎಂಬ ಶಬ್ದ ಎರಡು ಅರ್ಥಗಳಲ್ಲಿ ಪ್ರಾಚೀನ ಕಾಲದಲ್ಲಿ ಬಳಕೆಯಾಗುತ್ತಿತ್ತು. ಒಂದು

ಪ್ರಭುವಾಗಿ ಆಳುವುದು, ಅಧಿಕಾರಿಯಾಗಿ ಆಡಳಿತವನ್ನು ನಡೆಸುವುದು. ಪ್ರಭುಗಳಾಗಿ ವಂಶ ಪಾರಂಪರ್ಯದಿಂದ ಆಳುತ್ತಿದ್ದವರು ಚಕ್ರವರ್ತಿಗಳು, ಮಹಾಮಂಡಳೇಶ್ವರರು, ಸಾಮಂತರು ನಾಳ್ಗಾವುಂಡರು ಪ್ರಭುಗಾವುಂಡರು ಗಾವುಂಡರು, ಇಲ್ಲಿ ಆಡಳಿತ ವಿಭಾಗಕ್ಕೆ ಸಂಬಂಧಿಸಿದವರೆಂದರೆ ಮಹಾಸಾಮಾಂತಾಧಿಪತಿ, ಮಹಾ ಪ್ರಚಂಡ ದಂಡನಾಯಕ, ಸುಂಕದ ಮಹಾಸಾಮಂತ, ದಂಡನಾಯಕ, ಪೆರ್ಗಡೆ ಇತ್ಯಾದಿ ಅಧಿಕಾರಿಗಳು ಆಡಳಿತ ವಿಭಾಗ ತಿಳಿದು ಬರುತ್ತದೆ.

**ಗಂಗವಾಡಿ (೯೬೦೦೦)**

ಗಂಗವಾಡಿ ತೊಂಬತ್ತಾರು ಸಾವಿರ ಗಂಗರಸರ ಆಡಳಿತಕ್ಕೆ ಒಳಪಟ್ಟಿದ್ದ ಪ್ರದೇಶವನ್ನು ಗಂಗವಾಡಿ ಎಂದು ಕರೆಯುತ್ತಿದ್ದರು. ಇದು ೯೬೦೦೦ ಗ್ರಾಮಗಳ ದೊಡ್ಡ ವಿಭಾಗವಾಗಿತ್ತೆಂದು ಬಿ.ಎಲ್. ರೈಸರು ಶಾತವಾಹನರ ಅವನತಿಯ ನಂತರ ಗಂಗವಾಡಿಯ ಹೆಸರು ಪ್ರಾರಂಭವಾಯಿತೆಂದು ಹೇಳಿದ್ದಾರೆ. ಗಂಗವಾಡಿಯ ಮೆರೆಯನ್ನು ಉತ್ತರಕ್ಕೆ ಮದಂದಲಿ, ಪೂರ್ವಕ್ಕೆ ತೊಂಡನಾಡು, ಪಶ್ಚಿಮಕ್ಕೆ ಸಮುದ್ರ, ದಕ್ಷಿಣ ಕೊಂಗನಾಡು ಎಂದು ಗುರುತಿಸಿದ್ದಾರೆ. ಗಂಗರಸರ ತರುವಾಯ ಇದು ಹೊಯ್ಸಳ ವಶವಾಯಿತು. ಶಾಸನಗಳಲ್ಲಿ "ಪೋಯ್ಸಳ ದೇವರು ಗಂಗವಾಡಿ ತೊಂಬತ್ತು ಸಾವಿರ ಮನೇಕಚ್ಚತ್ರದಿಂದ ರಾಜ್ಯಂಗೆಯತ್ತಮಿರೆ" ಎಂಬ ಮಾತುಗಳು ಬರುತ್ತವೆ.

**ನೊಳಂಬವಾಡಿ (೩೨೦೦೦)**

ನೊಳಂಬವಾಡಿ ೩೨೦೦೦ ವಿಭಾಗಗಳನ್ನು ಆಳುತ್ತಿದ್ದ ಪಲ್ಲವರ ಗಂಗರ, ರಾಷ್ಟ್ರಕೂಟರ, ಚಾಲುಕ್ಯರ ಕಾಲದಲ್ಲಿ ನೊಣಂಬರು ಅಥವಾ ನೊಳಂಬರು ಎಂದು ಕರೆಯುತ್ತಿದ್ದರು. ವಿಕ್ರಮಾದಿತ್ಯನ ಕಾಲಕ್ಕೆ ಪಾಂಡ್ಯರು ಮಹಾ ಮಾಂಡಳೇಶ್ವರನಾಗಿ ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದರು. ಇದರ ಉಪವಿಭಾಗಗಳು ಬೇಳ್ತೂರು – ೧೨ ಹಿರೆತೊಗಲೇರಿಯ ಶಾಸನಗಳಲ್ಲಿ ನೊಳಂಬವಾಡಿಯೊಳಗ್ಗದ ಸಾವಿರ ನಾಡಿನೊಳು ಕದಂನಾಡೆಯು ನೋಳ್ಪುವೆತ್ತಸವ ಬೆಳ್ತೂರು ಎಂದರೆ, ಬೆಳ್ತೂರು ಇಂದಿನ ಬೇತೂರು ಗ್ರಾಮವಾಗಿದೆ. ಅಂದು ಇದು ಕದಂಬಳಿಗೆ ೧೦೦೦ ದ ಉಪವಿಭಾಗವಾಗಿತ್ತು.[೧೨]

**ಕದಂಬಳಿಗೆ – ೧೦೦೦**

ಕದಂಬಳಿಗೆ – ೧೦೦೦ (ಸಾಸಿರ) ಇದು ದಾವಣಗೆರೆ, ಹರಿಹರ, ಜಗಳೂರು, ಹರಪನಹಳ್ಳಿ, ಚಳ್ಳಕೆರೆ ಮತ್ತು ಚಿತ್ರದುರ್ಗದ ಕೆಲವು ಗ್ರಾಮಗಳನ್ನು ಒಳಗೊಂಡಿತ್ತು.

ಸಾಸರಿ ನಾಡ ಮುನ್ನೆಂಯಂ ಅಣ್ಣಮರಸನು ಅಧಿಕಾರಿಯಾಗಿದ್ದನು. ಕಂಪಣವಯ್ವತ್ತು ಕದಂಬಳಿಗೆ ಸಾಸಿರದ ಉಪವಿಭಾಗವಾಗಿದ್ದು ಇದರ ಮುಖ್ಯ ಗ್ರಾಮ ಹಾಗೂ ಗ್ರಾಮಗಳ ವಿಷಯ ತಿಳಿದುಬರುವುದಿಲ್ಲ ಮಳಲಕೆರೆ ಎಂಬ ಗ್ರಾಮವು ಕಂಪಣವಯ್ಯತ್ತರ ಒಂದು ಗ್ರಾಮವಾಗಿತ್ತು. ಕಂದಗಲ್ಲು ನೊಳಂಬವಾಡಿಯಲ್ಲಿ ಬರುವ ಒಂದು ಗ್ರಾಮವಾಗಿದೆ. ತ್ರಿಭುವನ ಮಲ್ಲರಾಯ ಪಾಂಡ್ಯದೇವ ಕ್ರಿ.ಶ. ೧೧೨೪ರ ಸುಮಾರಿಗೆ ಆಡಳಿತ ನಡೆಸುತ್ತಿದ್ದನೆಂದು ತಿಳಿದು ಬರುತ್ತದೆ. ಶಾಬನೂರು ಮತ್ತು ಆನೆಕೊಂಡ ಶಾಸನಗಳಲ್ಲಿ ಇವನ ಪರಾಕ್ರಮವನ್ನು ವರ್ಣಿಸುತ್ತವೆ. ತ್ರಿಭುವನ ಮಲ್ಲ ಪಾಂಡ್ಯ ಸಹಜವಾದ ಸೈನ್ಯ ಮತ್ತು ಮಂತ್ರಿಮಂಡಲ, ಅಧಿಕಾರಿಗಳನ್ನು ಹೊಂದಿದ್ದನು. ಮಹಾಮಂಡಳೇಶ್ವರ ಡಾಕರಸ–ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನ ಕೆಳಗಿನ ಅಧಿಕಾರಿಯಾಗಿದ್ದನು ಇವನು ಮಹಾಸಾಮಂತನಾಗಿದ್ದು, ಮುಂದೆ ಮಂಡಳೇಶ್ವರನಾಗಿದ್ದಾನೆ. ಮಹಾಸಾಮಂತ ಪಡೆವಳ ದುಗಯ್ಯ ಪಾಂಡ್ಯರ ಪಾದ ಪದ್ಮೋಪ ಜೀವಿಯಾಗಿರುವ ಈತನು 'ಮಹಾಸಾಮಸ್ತ ಪಡೆವಳೆದುಗಯ್ಯ' ಎಂದು ಆಲೂರು ಶಾಸನವು ತಿಳಿಸುತ್ತದೆ. ಮಹಾಪ್ರಧಾನ ಮುದ್ದರಸ ಮತ್ತು ಸೂಯ ದಂಡನಾಯಕ ಇವರನ್ನು ಹಿರೇತೊಗಲೆರಿ ಮತ್ತು ಶಾಬನೂರು ಶಾಸನಗಳು ಹೆಸರಿಸುತ್ತವೆ. ಪ್ರಭುಗಾವುಂಡರನ್ನು ದಾವಣಗೆರೆಯ ಮೂವರು ಪ್ರಭುಗಳಾದ ಬರ್ಮಗಾವುಂಡ ಸಂಕರಗಾವುಂಡ ಮದೆಯ ಮುರಸ, ಇವರನ್ನು ಶಾಸನವು ಸ್ವಸ್ತಿಸಮಸ್ತ ಪ್ರಶಸ್ತಿ ಸಹಿತಂ ಸಕಲ ಗುಣ ಸಂಪನ್ನರಪ್ಪ ಕಂನಡನಾಲ್ಕು ಸಾಸಿರದ ಮಂಮ್ಮರಿ ದಂಡಗಳಿಗೆ ಮುಖ್ಯರಪ್ಪ ಶೈವರ ದೇವಿ ಶೆಟ್ಟಿಯರು ಎಂದು ಗಾವುಂಡರನ್ನು ಹೆಸರಿಸುತ್ತದೆ.

## ದಾವಣಗೆರೆ ಪರಿಸರದ ಪ್ರಾಚೀನ ಅಗ್ರಹಾರಗಳು

ಅಗ್ರಹಾರಗಳು ಮೂಲತಃ ಬ್ರಾಹ್ಮಣರು ನಿವಾಸವಾಗಿರುವ ಗ್ರಾಮಗಳಾಗಿದ್ದು, ಗ್ರಾಮೀಣ ಮತ್ತು ವೈದಿಕ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಕರ್ನಾಟಕದಲ್ಲಿ ಮೊಟ್ಟಮೊದಲ ಅಗ್ರಹಾರ ನೆರೆಯ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಸಹಲಾಟವಿ ಗ್ರಾಮವೆಂದು ಗುರುತಿಸಲಾಗಿದೆ. ಅಗ್ರಹಾರ, ಅಗ್ರ ಮತ್ತು ಅಹಾರ ಎಂಬ ಎರಡು ಪದಗಳಿಂದ ಕೂಡಿದೆ. ಅಗ್ರ ಎಂದರೆ ಶ್ರೇಷ್ಠ, ಅಹಾರ ಎಂದರೆ ನೆಲೆ ಆದುದರಿಂದ ಶ್ರೇಷ್ಠವಾದ ಬ್ರಾಹ್ಮಣರು ನೆಲೆಗೊಂಡ ಗ್ರಾಮವೇ ಅಗ್ರಹಾರ ಎಂದು ಪ್ರೊ. ಡಿ.ಎಲ್. ನರಸಿಂಹಾಚಾರ್ಯರು ತಿಳಿಸುತ್ತಾರೆ.[೧೩] ಇವು ಶಿಕ್ಷಣ ಕೇಂದ್ರಗಳಾಗಿಯಲ್ಲದೆ ಧಾರ್ಮಿಕ ಕೇಂದ್ರಗಳಾಗಿಯೂ ಕಾರ್ಯನಿರ್ವಹಿಸುತ್ತಾ ಬಂದಿರುತ್ತ'ವೆ. ಸಾಮಾನ್ಯವಾಗಿ ಅಗ್ರಹಾರಗಳಲ್ಲಿ ವೈಷ್ಣವ ಶೈವರಿಬ್ಬರಿದ್ದರೂ, ವೈಷ್ಣವರು ಹೆಚ್ಚಾಗಿ ನೆಲೆಸಿದ್ದಾರೆ. ವೈಷ್ಣವಪುರಿ ಎಂದೂ, ಶೈವರು ಹೆಚ್ಚಾಗಿ ನೆಲೆಸಿದ್ದರೆ, ಶಿವಪುರಿ ಎಂದೂ ಕರೆಯಲಾಗುತ್ತಿತ್ತು. ದಾನ ಪಡೆದ ಗ್ರಾಮ

ಚಿಕ್ಕದಾಗಿದ್ದರೆ ಅದನ್ನು ಅಗ್ರಹಾರ ಎಂದೂ, ದೊಡ್ಡದಾಗಿದ್ದರೆ ಬ್ರಹ್ಮಪುರಿ ಎಂದೂ, ಇನ್ನೂ ದೊಡ್ಡ ವಿದ್ಯಾಕೇಂದ್ರವಾಗಿ ಬದಲಾವಣೆಯಾಗಿದ್ದಾರೆ ಘಟಿಕಾಸ್ಥಾನವೆಂತಲೂ ಶಾಸನಗಳಲ್ಲಿ ಗುರುತಿಸಲಾಗಿದೆ.

ದಾವಣಗೆರೆ ಜಿಲ್ಲೆಯಲ್ಲಿ ೮೦ಕ್ಕೂ ಹೆಚ್ಚು ಅಗ್ರಹಾರಗಳು ಈವರೆಗೆ ಗುರುತಿಸಲಾಗಿದ್ದು, ದಾವಣಗೆರೆ ತಾಲೂಕು ಒಂದರಲ್ಲೇ ೨೦ಕ್ಕೂ ಹೆಚ್ಚು ಅಗ್ರಹಾರಗಳು ಇದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಇವುಗಳಲ್ಲಿ ಬಹಳಷ್ಟು ಶಾಸನಗಳನ್ನು ಕರ್ನಾಟಕ ಶಾಸನ ಪಿತಾಮಹ ಬಿ.ಎಲ್. ರೈಸರು ತಮ್ಮ ಶಾಸನ ಸಂಪುಟ–೧೧ರಲ್ಲಿ ಪ್ರಕಟಿಸಿದ್ದಾರೆ. ದಾವಣಗೆರೆ ತಾಲೂಕಿನಲ್ಲಿ ಚಾಲುಕ್ಯರು, ನೊಳಂಬರು, ಉಚ್ಚಂಗಿ ಪಾಂಡ್ಯರು, ಅಸಂಧಿ ಗಂಗರು, ಸೇವಣರು, ಚಿತ್ರದುರ್ಗ ನಾಯಕರು ಮಾತ್ರ ದಾನ ನೀಡಿದ ಅಗ್ರಹಾರಗಳು ಕಂಡುಬರುತ್ತದೆ. ಹೀಗೆ ದತ್ತಿದಾನದಿಂದ ಪಡೆದ ಅಗ್ರಹಾರಗಳೂ ಅನೇಕ ರಾಜಕೀಯ ಸ್ಥಿತ್ಯಂತರಗಳ ನಡುವೆಯೂ ಬಹಳಕಾಲ ತನ್ನ ಅಸ್ತಿತ್ವ ಕಾಪಾಡಿಕೊಂಡು ಬಂದಿರುವುದನ್ನು ಗುರುತಿಸಬಹುದಾಗಿದೆ.

**ಬೇತೂರು :** ದಾವಣಗೆರೆ ಈಶಾನ್ಯಕ್ಕೆ ಇರುವ ಈಗ ಎಲೇಬೇತೂರು ಎಂದು ಕರೆಯಲಾಗಿರುವ ಬೇತೂರು ಗ್ರಾಮವು ಪ್ರಾಚೀನ ಅಗ್ರಹಾರದಲ್ಲೊಂದಾಗಿದೆ. ಉಚ್ಚಂಗಿ ಪಾಂಡ್ಯರ ನೆಲೆಯಾಗಿದ್ದ ಈ ಗ್ರಾಮದಲ್ಲಿರುವ ದಾವಣಗೆರೆ ೧೨ರ ಶಾಸನದ ಪ್ರಕಾರ ಇದನ್ನು ಪರಮೇಶ್ವರ ದತ್ತಿಯಾಗಿ ತ್ರಿಭುವನಮಲ್ಲ ಪಾಂಡ್ಯನ ಕಾಲದಲ್ಲಿ ಅವನ ಸಾಮಂತ ಬೊಮ್ಮರಸ ವಿಕ್ರಮ ಶಕ ೩೩ನೇ ಸರ್ವಧಾರಿ ಸಂವತ್ಸರದ ಪುಷ್ಯಶುದ್ಧ ಪಂಚಮಿ ಬ್ರಿಹವಾರದ ಸಂಕ್ರಮಣ ಕ್ರಿ.ಶ. ೧೧೦೭ ವ್ಯತಿಪಾತ ಕಾಲದಲ್ಲಿ ನೀಲಕಂಠ ರಣದೇವರ ಕಾಲಂಕರ್ಚಿ ಬಗ್ಗೆ ತಿಳಿಸುತ್ತಾ ಅಲ್ಲಿನ ಸರ್ವೇಶ್ವರ ದೇವರ ರಂಗಭೋಗ, ದೀಪ ನೈವೇದ್ಯಕ್ಕೆ ದಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ.[೧೪] ಅಲ್ಲಿರುವ ಇನ್ನೊಂದು ಶಾಸನ ಪ್ರಜಾಪತಿ ಸಂವತ್ಸರದಲ್ಲಿ ಸೆವುಣರ ವೀರಮಹಾದೇವರಾಯನ ಪ್ರಶಸ್ತಿ ಹಸ್ತದಲ್ಲಿ ಬಾಡಮನಗ್ರಹಾರ ಮಾಡಿ ಬಿಡುವಲ್ಲಿ ಲಕ್ಷ್ಮೀ ಜೀನಾಲಯಕ್ಕೆ ಹುಣಸೇಹಳ್ಳಿಯನ್ನು ಹಂನೆರಡು ಹೊಂನಿನಿರಯುತ ಶ್ತೋತ್ರವಾಗಿ ಅಲ್ಲಿನ ಪಾರ್ಶ್ವನಾಥ ದೇವರ ಸನ್ನಿಧಿಯಲ್ಲು ಪದ್ಮಸೇನಭದ್ದಾರಕದೇವರ ಪಾದ ಪ್ರಕ್ಷಾಳನ ಮಾಡಿ ದಾನಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಈ ಶಾಸನದಿಂದ ಜೈನರಿಗೆ ಕೊಟ್ಟಿದಾನವನ್ನು ಅಗ್ರಹಾರವಾಗಿ ಪರಿಗಣಿಸಿರುವುದು ಕಂಡುಬರುತ್ತದೆ.

**ಹೆಮ್ಮನ ಬೇತೂರು :** ಇಲ್ಲಿನ ಸಿದ್ಧೇಶ್ವರ ದೇವಸ್ಥಾನದ ಮುಂದೆ ಎರಡು ಶಾಸನಗಳಿದ್ದು, ಒಂದು ಶಾಸನ (ದಾವಣಗೆರೆ – ೧೭೨) ದ್ವಾರವತೀ ಪುರಾಧೀಶ್ವರ ಪ್ರೌಢಪ್ರತಾಪ ವೀರಮಹಾದೇವರಾಯನ ಸಾಮಂತ ಹೇಮಾರ್ಡಿ ದೇವರಸರ ಕುಮಾರ ವಿಠಲದೇವರಸರು ಶಕ ೧೧೮೦ (ಕ್ರಿ.ಶ. ೧೨೫೮)ಗೆ ಕ್ಷಯ ಸಂವತ್ಸರದ ಚೈತ್ರಶುದ್ಧ ಚತುರ್ದಶಿ ಸೋಮವಾರ ಶ್ರೀ ಮದನಾರಿಯಗ್ರಾಹಾರಂ ಪ್ರವಿಷ್ಟದಹಳ್ಳಿ ಹೆಂಮನ ಬೇತೂರು ಮೂಲ ಸ್ಥಾನ ಕಲಿದೇವರಿಗೆ ಅಶೇಕ್ಷಮಹಾಜನಗಳ ಸಮಕ್ಷಮದಲ್ಲಿ ಸರ್ವ ಮಾನ್ಯವಾಗಿ ಭೂಮಿ ಧಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಇನ್ನೊಂದು ಶಾಸನ (ದಾವಣಗೆರೆ–

೧೭೧) ಅದೇ ದಿನ ಹೆಂಮನಬೇತೂರು ಮಲ್ಲಯ್ಯ ದೇವರಿಗೆ ಕಲ್ಲ ಗುರುಗಳ ಕಾಲಂಕರ್ಚಿ ಹಾಲು ಮಂಡಿಗೆಗೆ ಬೊಮ್ಮನಾಯಕ ಬಿಟ್ಟ ಧರ್ಮವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಹೆಂಮನ ಬೇತೂರು ಅಗ್ರಹಾರವೆಂದು ಉಲ್ಲೇಖಿಸದಿರುವುದು ಅಚ್ಚರಿ ತರುತ್ತದೆ.

**ಗಂಡಮುಕ್ತೇನಹಳ್ಳಿ :** ಹನುಮಂತ ದೇವಾಲಯದ ಬಳಿ ಇರುವ ಒಂದು ಶಾಸನ (ದಾವಣಗೆರೆ – ೧೩೦) ದಲ್ಲಿ ಚಿತ್ರದುರ್ಗದ ಬರಮಂಣ ನಾಯಕರು ಶಕ ೧೬೩೩ ಕ್ರಿ.ಶ. ೧೭೧೧ ರ ಸಂವತ್ಸರ ಅಶ್ವೀಜ ಶುಕ್ಲ ೧೦ ರಂದು ಭಾರದ್ವಾಜ ಗೋತ್ರದ ನಾರಾಯಣಪ್ಪನ ಪುತ್ರರಾದ ಲಕ್ಷ್ಮೀಪತಿಯ ಪುತ್ರರಾದ ಬೊಕ್ಕಸದ ನಾರಾಯಣಪ್ಪಗೆ ಗಂಡಮುಕ್ತೇನಹಳ್ಳಿಯಂಬ ಗ್ರಾಮವನ್ನು ಯೇಕಭೋಗ್ಯ ಅಗ್ರಹಾರವಾಗಿ ಮಾಡಿ, ತಮ್ಮ ಹಿರಿಯರಿಗೆ ಪುಣ್ಯವಾಗಬೇಕೆಂದು ದಾನಕೊಟ್ಟಿದ್ದನ್ನು ತಿಳಿಸುತ್ತದೆ.[೧೫]

**ಚಿಕ್ಕಬೂದಿಹಾಳು :** ಗ್ರಾಮದ ಆಂಜನೇಯ ಗುಡಿಯಲ್ಲಿರುವ ದಾವಣಗೆರೆ – ೧೬ ಶಾಸನದಂತೆ ಶಕ ೧೬೪೦ (ಕ್ರಿ.ಶ. ೧೭೧೮)ನೆಯ ವಿಳಂಬ ಸಂವತ್ಸರ ಮಾಘಶುದ್ಧ ೧೫ ರಂದು ವಿಶ್ವಾಮಿತ್ರ ಗೋತ್ರದ ಬೆಳಗಾವಿ ರಾಮಣ್ಣ ನಾಯಕರ ಪುತ್ರರಾದ ಸೂರಪ್ಪ ನಾಯಕರ ಪುತ್ರರಾದ ರಾಮಂಣಾಯಕರಿಗೆ ಚಿತ್ರದುರ್ಗದ ಭರಮಣ್ಣ ನಾಯಕರು ಬೇತೂರು ಸೀಮೆಯೊಳಗಣ ಆ ಗ್ರಾಮವನ್ನು ಅಗ್ರಹಾರವಾಗಿ ದಾನಮಾಡಿಕೊಟ್ಟಿದ್ದನ್ನು ತಿಳಿಸುತ್ತದೆ.

ಪ್ರಾಚೀನ ತ್ರಿಕುಟಾಚಲ ತ್ರೈಪುರುಷ ದೇವಾಲಯಗಳಿರುವ ಸ್ಥಳಗಳು ಸಮಾನ್ಯವಾಗಿ ಅಗ್ರಹಾರಗಳಾಗಿದ್ದವೆಂದು ವಿದ್ವಾಂಸರು ಅಭಿಪ್ರಾಯವಿದೆ. ಅದರಂತೆ ದಾವಣಗೆರೆ ತಾಲ್ಲೂಕಿನ ಆನಗೋಡು, ಆನೆಕೊಂಡ, ಆಲೂರು, ಕೊಗ್ಗನೂರು, ಕಂದಗಲ್ಲು, ಕಡ್ಲೆಬಾಳು, ಹಿರೇತೊಗಲೇರಿ, ಲೋಕಿಕೆರೆ, ನೀರ್ಥಡಿ ಮುಂತಾದವುಗಳು ಅಗ್ರಹಾರಗಳಾಗಿರುವ ಸಾಧ್ಯತೆ ಕಂಡುಬರುತ್ತದೆ. ಈ ಅಗ್ರಹಾರ ದಾನ ಶಾಸನಗಳು ಬಹಳಷ್ಟು ಕನ್ನಡಭಾಷೆ ಮತ್ತು ಲಿಪಿಯಲ್ಲಿಯೇ ಇವೆ. ದಾನ ಪಡೆದ ವ್ಯಕ್ತಿಗೆ ಆ ಗ್ರಾಮಕ್ಕೆ ಸಲ್ಲುವ ಕಾಡಾರಂಭ, ನೀರಾರಂಭ, ನಿಧಿ ನಿಕ್ಷೇಪ, ಜಲಪಾಷಾಣ, ಅಕ್ಷಿಣಿ ಆಗಮಿಸಿದ್ದ ಸಾಧ್ಯಗಳೆಂಬ ಅಷ್ಟಭೋಗ ಅವರ ವಂಶಪಾರಂಪರ್ಯಗತವಾಗಿ ಅನುಭವಿಸಿಕೊಂಡು ಸುಖದಿಂದ ಇರಬೇಕೆಂದು ಬರೆಸಿಕೊಡಲ್ಪಟ್ಟಿವೆ.

## ೪.೨ ಸಾಮಾಜಿಕ ಜೀವನ

ಒಂದು ಸಮಾಜದಲ್ಲಿ ವಿವಿಧ ಧಾರ್ಮಿಕ, ಸಾಮಾಜಿಕ, ವೃತ್ತಿ ಸಂಬಂಧಿಸಿದ ಮೇಲು ಕೀಳೆಂಬ ಜಾತಿಯ ಗುಂಪುಗಳು ಎಲ್ಲಾ ಪ್ರದೇಶಗಳಲ್ಲಿ ಕಂಡು ಬರುತ್ತವೆ. ಪ್ರಾರಂಭದಲ್ಲಿ ವರ್ಣವ್ಯವಸ್ಥೆ ಪದ್ಧತಿಯ ತಿಳಿಯಬಹುದಾಗಿದೆ. ನಂತರದಲ್ಲಿ ಅದರಲ್ಲಿ ಸ್ವಲ್ಪ ಬದಲಾವಣೆ ಕಂಡು ಬಂದು ಹಾಗೆ ಸಾಮಾಜದಲ್ಲಿ ಬದಲಾವಣೆಯಾಗಿತ್ತೆಂದು ಹೇಳಬಹುದು. ನಂತರದ ಜಾತಿ ಪದ್ಧತಿಯಲ್ಲಿ ಇಂದಿನ ಹಾಗೆಯೇ ಅಂದೂ ಸಹ ಸರ್ವೇ ಸಾಮಾನ್ಯವಾಗಿದ್ದಿತು. ಮೇಲು

ಜಾತಿಯವರು ಕೀಳು ಜಾತಿಯವರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದರು.[೧೬] ಪ್ರಾರಂಭದಲ್ಲಿ ಜಾತಿಗಳು ಅವರು ಮಾಡುತ್ತಿದ್ದ ಕೆಲಸದ ಅಧಾರದ ಮೇಲೆ ಸೃಷ್ಟಿಯಾದವು ಎಂದು ಕಂಡು ಬರುತ್ತದೆ. ಸಾಮಾಜದಲ್ಲಿ ಜಾತಿಗಳನ್ನು ಈ ಕೆಳಕಂಡಂತೆ ವಿವರಿಸಬಹುದಾಗಿದೆ. ಸಮಾಜದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಾಹ್ಮಣರಿಗೆ ಉನ್ನತವಾದ ಸ್ಥಾನಮಾನವಿದ್ದವು. ಇವರು ಪುರೋಹಿತ ಮತ್ತು ಶಾಸ್ತ್ರೀಯ ವಿದ್ಯಮಗಳಲ್ಲಿ ಅವರು ತೊಡಗಿಸಿ ಕೊಂಡಿದರು.

ಪ್ರಾಚೀನ ಕಾಲದಲ್ಲಿ ರಾಜ ಅಥವಾ ಶ್ರೀಮಂತ ವ್ಯಕ್ತಿಯಿಂದ ದಾನರೂಪದಲ್ಲಿ ಆರಂಭವಾದ ಅಗ್ರಹಾರಗಳಲ್ಲಿ ಇವರು ವಾಸಿಸುತ್ತಿದ್ದರು.[೧೭] ಅವರು ಎಲ್ಲಾ ರೀತಿಯ ವಿಧ್ಯೆಯಲ್ಲಿ ಪಾಂಡಿತ್ಯಪಡಿದವರು ಆಗಿದ್ದರು. ಬ್ರಾಹ್ಮಣರು ಸಮಾಜದಲ್ಲಿ ಕಟ್ಟು ಪಾಡುಗಳನ್ನು ನಡೆಸಿಕೊಂಡು ಬರುತ್ತಿದ್ದರು. ಬ್ರಾಹ್ಮಣರು ಸಮಾಜದಲ್ಲಿ ಸುಖಜೀವನ ನಡೆಸುತ್ತಿದ್ದರು. ಮುಂದೆ ಕಾಲಕಳೆದಂತೆ ಜಾತಿಗಳಲ್ಲಿ ಉಪ ಪಂಗಡಗಳಾಗಿ ಜಾತಿ ಜಾತಿಯಲ್ಲಿ ವೈಷಮ್ಯದ ಮನೋಭಾವನೆ ಮೂಡಿ ಬರುತ್ತದೆ ಎನ್ನಬಹುದಾಗಿದೆ. ನಂತರದಲ್ಲಿ ರಾಜ್ಯವನ್ನು ಕಟ್ಟಿ, ಬೆಳೆಸಿ, ಕಾಪಾಡುವ ಕೆಲಸವನ್ನು ನಿರ್ವಹಿಸುವ ಜವಾಬ್ದಾರಿಯನ್ನು ರಾಜರು ಕ್ಷತ್ರಿಯರಾಗಿ ತಿಳಿದು ಬರುತ್ತದೆ. ಇವರು ಪ್ರಾರಂಭದ ಜೀವನದಲ್ಲಿ ಕೃಷಿಕರೂ ಅಥವಾ ಪಶುಪಾಲಕ ಜೀವನವನ್ನು ಮಾಡಿರುವುದು ಕಂಡು ಬಂದಿದೆ. ನಂತರದಲ್ಲಿ ಕ್ಷತ್ರಿಯರು ದೇಶದ, ರಾಜ್ಯದ ಜನತೆಯ ರಕ್ಷಣೆ ಮಾಡುವ ಕೆಲಸವನ್ನು ವಹಿಸಿಕೊಂಡು ಉನ್ನತವಾದ ಜೀವನ ನಡೆಸಿಕೊಂಡು ಸಮಾಜದಲ್ಲಿ ಮೇಲಿನ ಸ್ಥಾನಕ್ಕೆ ತಿಳಿದುಬರುತ್ತಾರೆ.

ಸಾಮಾಜದಲ್ಲಿ ವ್ಯಾಪಾರದ ಕೆಲಸದಲ್ಲಿ ತೊಡಗಿದ ಜನರ ಗುಂಪುಗಳನ್ನು ಮಾರನೆಯ ವರ್ಣದವರು ಅಥವಾ ವೈಶ್ಯರು ಎಂದು ಕರೆಯಲಾಗಿದೆ. ನಂತರದಲ್ಲಿ ಕೃಷಿಯನ್ನೆ ನಂಬಿ ಭೂಮಿಯನ್ನು ಉತ್ತಿಬಿತ್ತಿ ಬೆಳೆ ತೆಗೆಯಲು ಬಂದವರೆ ಶೂದ್ರರು. ಅದರೆ ಮೊದಲು ಹೀಗೆ ಕರೆದರು ನಂತರ ದಿನಗಳಲ್ಲಿ ಕೃಷಿ ಕೆಲಸವನ್ನು ಮಾಡುವರನ್ನು ಒಕ್ಕಲಿಗರು ಎಂದು ಕರೆಯುತ್ತಿದ್ದಾರೆ. ಸಾಮಾಜಿಕ ರಚನೆಯಲ್ಲಿ ಜೀವನದ ಉಳಿವಿಗಾಗಿ ಕೈಗೊಂಡ ಕೆಲಸಗಳ ಆಧಾರದ ಮೇಲೆ ಗುರುತಿಸಿಕೊಂಡ ಜಾತಿಗಳು, ಅಗಸ, ಹಜಾಮ, ಕಮ್ಮಾರರು, ಬಡಗಿಗಳು, ಕುಂಬಾರ, ಚಮ್ಮಾರ, ಉಪ್ಪಾರ, ಕೊನೆಯದಾಗಿ ಹೊಲೆಯ – ಮಾದಿಗರು ಸಾಮಾಜದಲ್ಲಿ ಕಂಡು ಬರುತ್ತಾರೆ.

**ಅಗಸರು** : ಇವರನ್ನು ಹಲವಾರು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಮಡಿವಾಳರು, ಸಾಕಾಲವಾಡರು, ರಜಕರು, ದೋಬಿಯವರು ಎಂದು ಹಲವಾರು ಹೆಸರುಗಳಿಂದ ಸಾಮಾಜದಲ್ಲಿ ಕರೆಸಿ ಕೊಳ್ಳುತ್ತಾರೆ. ಇವರು ಪ್ರಾರಂಭದಿಂದಲೂ ಗ್ರಾಮದ ಜನರ ಅಥವಾ ತಾವು ವಾಸಿಸುವ ಪ್ರದೇಶದ ಜನರ ಬಟ್ಟೆ ತೊಳೆಯುವುದು ಇವರ ವೃತ್ತಿಯಾಗಿದೆ. ಕೆಲವರು ವ್ಯವಸಾಯದ

ಜೀವನದಲ್ಲಿ ಭಾಗಿಯಾಗಿ ಮುಂದುವರಿಸಿಕೊಂಡು ಬರುತ್ತಿದ್ದರೆ. ಇವರು ಗೌರಿಹಬ್ಬವನ್ನು ಸಂಡಗರದಿಂದ ಆಚರಣೆ ಮಾಡಿ ನಂತರ ಉಬ್ಬೆ ಎಂದರೆ ಅವರ ಸಂಪ್ರದಾಯದಲ್ಲಿ ಬಟ್ಟೆಗಳನ್ನು ಬಿಸಿನೀರಿನಲ್ಲಿ ಕುದಿಸುತ್ತಾರೆ. ಇವರು ಪೂಜಿಸುವ ದೇವರುಗಳು ಪ್ರಾರಂಭದಲ್ಲಿ ಮೈಲಾರ, ಬಸವೇಶ್ವರರ ಪೂಜಿಸಿಕೊಂಡ ನಂತರ ದಿನಗಳಲ್ಲಿ ಮಡಿವಾಳ ಮಾಚಯ್ಯನನ್ನು ಗೌರವಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

**ಬೆಸ್ತರು** : ಇವರಿಗೆ ಸಾಮಾಜದಲ್ಲಿ ಅನೇಕ ಹೆಸರುಗಳು ಇದ್ದವೆಂದು ತಿಳಿದು ಬರುತ್ತದೆ. ಗಂಗಮತ, ಗಂಗಕಾಲ, ಗಂಗೆ ಮಕ್ಕಳು, ಗಂಗಾಪುತ್ರ, ಗೌರೀಮತ, ಅಂಬಿಗಾ ಎಂಬ ಹೆಸರುಗಳಿಂದ ಅಂದಿನಿಂದ ಇಂದಿಗೂ ಸಹ ಜನರ ಬಾಯಲ್ಲಿ ಉಳಿದು ಬಂದಿವೆ. ಇವರ ಜೀವನದ ಮುಖ್ಯ ಕಸುಬು ಮೀನು ಹಿಡಿಯುವುದು. ಪ್ರಾಚೀನ ಕಾಲದಲ್ಲಿ ಇವರು ಮುಖ್ಯ ರಾಜಪರಿಹಾರದವರನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಹೋರುವ ಕೆಲಸವನ್ನು ಮಾಡುತ್ತಿದ್ದರಂತೆ ನಂತರ ದಿನಗಳಲ್ಲಿ ನದಿಯಲ್ಲಿ ದೋಣಿ ನಡೆಸುವುದು, ಬೇಸಾಯ ಮಾಡುವುದು ಕೂಡ ಸಾಮಾನ್ಯವಾಗಿ ಕಂಡು ಬರುತ್ತದೆ.

**ಲಿಂಗಾಯಿತರು** : ಸಮಾಜದಲ್ಲಿ ಲಿಂಗಾಯಿತ ಎಂಬ ಪದವು ವೀರಶೈವ ಎಂಬ ಒಂದು ಧಾರ್ಮಿಕ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಪ್ರಾಚೀನ ಕಾಲದಲ್ಲಿ ವೈಧಿಕ ಧರ್ಮದ ಕೆಟ್ಟ ಪದ್ಧತಿಗಳ ವಿರುದ್ಧವಾಗಿ ಬೆಳೆದುಕೊಂಡು ನಂತರ ಬಸವಣ್ಣನವರ ಅದೀನದಲ್ಲಿ ಬಲಿಷ್ಠವಾಗಿ ಒಂದು ಧರ್ಮವಾಗಿ ಕಂಡು ಬಂದಿದೆ. ಕರ್ನಾಕಟದ ಎಲ್ಲಾ ಪ್ರದೇಶಗಳಲ್ಲಿ ಲಿಂಗಾಯಿತರು ಇದ್ದಾರೆ. ಇವರು ಧಾರ್ಮಿಕ ಕೇಂದ್ರಗಳನ್ನು ಹೆಚ್ಚು ಸ್ಥಾಪನೆ ಪ್ರಚಾರ ಮಾಡಿ ನಂತರ 'ಮಠ'ಗಳಾಗಿ ಗೌರವ ನೀಡಿದ್ದಾರೆ. ಇವರು ಹೆಚ್ಚಾಗಿ ವ್ಯವಸಾಯ ಮತ್ತು ವ್ಯಾಪಾರಗಳನ್ನು ಮೂಲ ಕೆಲಸವಾಗಿ ಇಂದಿಗೂ ಮಾಡುತ್ತಿದ್ದಾರೆ.

**ಕುರುಬರು** : ಇವರು ಪ್ರಾಚೀನ ಕಾಲದಿಂದಲೂ ಕುರಿ ಸಾಗಣಿಕೆಯ ಕೆಲಸವನ್ನು ಮೈಗೂಡಿಸಿಕೊಂಡು ಹಾಗೂ ಕುರಿಯ ಕೂದಲಿನಿಂದ ಕಂಬಳಿಯನ್ನು ಮಾಡುವುದು ಉದ್ಯೋಗವಾಗಿದೆ. ಇತ್ತೀಚಿನ ದಿನಗಳಲ್ಲಿ ಕೃಷಿಯನ್ನು ಮಾಡುತ್ತಾ ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳಸಿಕೊಂಡು ಬಂದಿದ್ದಾರೆ. ಇವರು ಹೆಚ್ಚಾಗಿ ಶೈವ ಮತಕ್ಕೆ ಸೇರಿದರೂ ಬೀರದೇವರನ್ನು ಪೂಜಿಸಿಕೊಂಡು ಬಂದಿದ್ದಾರೆ, ಇವರು ಹೆಚ್ಚಾಗಿ ಶೈವ ಮತಕ್ಕೆ ಸೇರಿದರೂ ಬೀರದೇವರನ್ನು ತಮ್ಮ ದೇವರಾಗಿ ಪೂಜಿಸುತ್ತಾರೆ. ಇಂದಿನ ದಿನಗಳಲ್ಲಿ ಅರಣ್ಯ ಪ್ರದೇಶಗಳಲ್ಲಿ ಬೆಟ್ಟದ ಕುರುಬ, ಜೇನುಕುರುಬ, ಕಾಡು ಕುರುಬ ಎಂಬ ಹೆಸರುಗಳ ಕುರುಬರನ್ನು ಕಾಣಬಹುದಾಗಿದೆ.

**ಉಪ್ಪಾರರು :** ಇವರ ಮುಖ್ಯ ಕಸುಬು ಉಪನ್ನು ತಯಾರಿಸುವುದು. ಇದರಲ್ಲಿ ವಿಶೇಷವಾಗಿ ನೆಲದ ಉಪ್ಪನ್ನು ತಯಾರಿಸುತ್ತ ಇದ್ದವರು. ಪ್ರಾಚೀನ ಕಾಲದಲ್ಲಿ ಇವರ ಕೆಲಸವು ಮಹತ್ವ ಹೊಂದಿತ್ತು. ಹಾಗೂ ಸಾಮಾಜದಲ್ಲಿ ವಿಶೇಷ ಗೌರವವನ್ನು ಪಡೆಯುತ್ತಿದ್ದರು. ಇವರು ತಮ್ಮ ಹೆಸರಿನ ಕೊನೆಯಲ್ಲಿ 'ಶೆಟ್ಟಿ' ಅಥವಾ 'ಗೌಡ' ಎಂದು ಸೇರುಸುತ್ತಿದಂತೆ ಇವರು ಹೆಚ್ಚಿನ ಜನರು ವೈಷ್ಣವ ಪರಂಪರೆಯ ಚೆನ್ನಕೇಶವು ಮೈಲಾರೇಶ್ವರ, ಬಾಲಾಜಿ ಹಾಗೂ ಭವಾನಿ ದೇವರನ್ನು ಪೂಜಿಸುತ್ತಿದ್ದರು.

**ಒಕ್ಕಲಿಗರು :** ಗ್ರಾಮದ ಪರಿಸರದಲ್ಲಿ ಹೆಚ್ಚು ಹೆಚ್ಚಾಗಿ ಕಂಡು ಬರುವ ಜನರು ಒಕ್ಕಲಿಗರು, ಇವರಲ್ಲಿ ಅನೇಕ ವಿಭಾಗಗಳಿವೆ ಹಳ್ಳಿಕಾರ, ಕುಂಚಿಟಿಗ ರೆಡ್ಡಿ, ಕಾಪು, ಕಮ್ಮ ಮತ್ತು ಮೊರಸು ಒಕ್ಕಲಿಗರೆಂದು, ಕನ್ನಡ ಭಾಷೆಯಲ್ಲಿ ಒಕ್ಕಲುತನ ಎಂದರೆ ಕೃಷಿ ಅಥವಾ ಬೇಸಾಯ ಮಾಡುವರು ಎಂದು ಕರೆಯುತ್ತಾರೆ. ಬೇರೆ ಪರಿಸರದಲ್ಲಿ ಕಡೆ ಇವರು ನಾಯಕ ಹಾಗೂ ಹೆಗ್ಗಡೆಯನ್ನು ಅಡ್ಡ ಹೆಸರುಗಳಿಂದ ಕರಿಯುವುದು ಕಂಡು ಬರುತ್ತದೆ. ಇವರ ದೇವರು ಅದಿ ಚುಂಚನಗಿರಿಯ ಗಂಗಾಂಧರೇಶ್ವರ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

**ಬೇಡರು :** ಇವರು ಒಂದೊಂದು ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಾರೆ. ಬ್ಯಾಡರು, ನಾಯಕ ಮಕ್ಕಳು, ವಾಲ್ಮೀಕಿ, ತಳವಾರ, ಬೇರಡ, ಪಾಳೆಯಗಾರರು ಎಂದು ಹೇಳಿಕೊಳ್ಳುತ್ತಾರೆ. ಇವರು ಅಂಜನೇಯ ದೇವರನ್ನು ಪೂಜಿಸುತ್ತಾರೆ. ಬೇಡರಲ್ಲಿ ಎರಡು ಪಂಗಡಗಳಿವೆ ಊರಬ್ಯಾಡರು, ಮ್ಯಾಸಬ್ಯಾಡರು. ಇವರು ತಮ್ಮದೆ ಅದ ಅಚಾರ ವಿಚಾರಗಳನ್ನು ರೂಢಿಸಿಕೊಂಡು ಸಂಸ್ಕೃತಿಯ ಜೀವನವನ್ನು ಹೆಚ್ಚಿಸಿಕೊಂಡು ಬದುಕುತ್ತಿದ್ದಾರೆ.

**ಹೊಲೆಯರು :** ಕನ್ನಡದಲ್ಲಿ 'ಹೊಲೆಯ' ಎಂಬುದುಜಾತಿ ಸೂಚಕ, ವೃತ್ತಿ ಸೂಚಕ ಹಾಗೂ ಬೈಗುಳ ವಾಚಕವಾಗಿ ಕರೆಯಲ್ಪಟಿದೆ. ಹೊಲೆಯರನ್ನು ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಹೊಲೆಯ ಚಲುವಾದಿ, ಚನ್ನ ಹೊಲೆಯಯರು, ಹರಿಜನರು, ಅದಿದ್ರಾವಿಡರು, ಬೇಗಾರ ಎಂಬ ನಾನಾ ಹೆಸರುಗಳಿಂದ ಕರೆಯಲಾಗುತ್ತದೆ. ಹೊಲೆಯರು ಹೊಲವನ್ನು ಕಾವಲು ಮಾಡುವುದರಿಂದ ಈ ಹೆಸರು ಬಂದಿರಬಹುದು. ಸಮಾಜದ ಕೆಳಸ್ತರಕ್ಕೆ ಬಿದ್ದು ತಮ್ಮ ಸರ್ವಸ್ವವನ್ನು ಕಳೆದುಕೊಂಡು ಅಸ್ಪೃಶ್ಯರಾಗಿ ಜೀವನ ನಡೆಸಿ ಇಂದಿಗೂ ಕಷ್ಟಗಳನ್ನು ಅನುಭವಿಸುತ್ತಿರುವ ಕೆಳ ಸಮುದಾಯ ಎಂದು ಹೇಳಬಹುದಾಗಿದೆ.

**ಮಾದಿಗರು :** ಇವರು ಸಹ ಹೊಲೆಯರಂತೆ ಸಾಮಾಜದಲ್ಲಿ ಕಷ್ಟ ನೋವುಗಳನ್ನು ಅನುಭವಿಸಿಕೊಂಡು ಬಂದ ಒಂದು ಜಾತಿಯಾಗಿದೆ. ಸತ್ತ ಪ್ರಾಣಿಗಳಂತೆ ಅಂದಿನ ಸಾಮಾಜದಲ್ಲಿ

ಇವರನ್ನು ನೋಡಿಕೊಳ್ಳುತ್ತಿತ್ತು. ಸಮಾಜದಲ್ಲಿ ಯಾವುದೇ ತರವಾದ ಗೌರವವನು ಮೇಲು ಜಾತಿಯ ಜನರು ನೀಡುತ್ತಿರಲಿಲ್ಲ. ಇವರು ಹೆಚ್ಚಾಗಿ ಚರ್ಮದ ಕೆಲಸವನ್ನು ಮಾಡುತ್ತಿದ್ದಾರೆ.

**ಸ್ತ್ರೀಯರ ಸ್ಥಾನಮಾನ**

ಕರ್ನಾಟಕದಲ್ಲಿ ಪ್ರಾಚೀನ ಕಾಲದಲ್ಲಿ ಮಹಿಳೆಯರಿಗೆ ಯಾವ ಸ್ಥಾನಮಾನವಿದ್ದಿತ್ತೆಂದು ಶಾಸನಗಳಿಂದ ತಿಳಿಯಬಹುದಾಗಿದೆ. ಎಲ್ಲಾ ರಾಜರ ಆಳ್ವಿಕೆಯ ಅವಧಿಯಲ್ಲಿ ರಾಣಿಯರು ಮತ್ತು ಶ್ರೀಮಂತ ಕುಟುಂಬದ ಮಹಿಳೆಯರು ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರೆಂದು ಹೇಳಬಹುದು.[೧೮] ರಾಣಿಯರಿಗೆ ಮತ್ತು ಶ್ರೀಮಂತ ಮಹಿಳೆಯರಿಗೆ ಮಾತ್ರ ಶಿಕ್ಷಣ ಪಡೆಯುವ ಅವಕಾಶವಿದ್ದಿತ್ತು. ಸಾಮಾನ್ಯ ಹಾಗೂ ಕೆಳಜಾತಿಯ ಮಹಿಳೆಯರ ಸ್ಥಿತಿ ಶೋಚನೀಯವಾಗಿತ್ತು. ಅವರಿಗೆ ಊಟ ಇರಲಿ ಸರಿಯಾದ ಬಟ್ಟೆಯೂ ಇರದಿರುವ ಪರಿಸ್ಥಿತಿಯಲ್ಲಿ ಜೀವನವನ್ನು ನಡೆಸುತ್ತಿದರು. ರಾಜರು ಮಾತ್ರ ಬಹು ಪತ್ನಿಯರನ್ನು ಹಿಂದೆ ಹೊಂದಿರುವುದನ್ನು ಕಾಣಬಹುದು. ಈ ಪದ್ದತಿಯು ಹೆಚ್ಚಾಗಿ ಶ್ರೀಮಂತರ, ರಾಜರ, ರಾಜಪರಿವಾರದವರ. ಬ್ರಾಹ್ಮಣರಲ್ಲಿ ಮಾತ್ರ ಹೆಚ್ಚು ಇತ್ತು ಎನ್ನಬಹದು. ಕೆಲವು ಕಡೆಗಳಲ್ಲಿ ಸಾಮಾನ್ಯರೂ ಸಹ ಇಬ್ಬರೂ ಪತ್ನಿಯರನ್ನು ಹೊಂದಿದ್ದರ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ.

ಅಂದಿನ ಸಮಾಜದಲ್ಲಿ ವಿಧವೆಯರ ಬದಕು ಶೋಚನೀಯ ರೀತಿಯಲ್ಲಿ ಕಳೆಯಬೇಕಾಗಿತ್ತು. ಅವರು ಹೆಚ್ಚಾಗಿ ತಮ್ಮ ಜೀವನವನ್ನು ಧಾರ್ಮಿಕ ಕಾರ್ಯಗಳಲ್ಲಿಯೇ ತೊಡಗಿಸಿಕೊಂಡು ಕಾಲ ಕಳೆಯುತ್ತಿದ್ದರು. ಸ್ತ್ರೀಯರಿಗೆ ಮಠಕ್ಕೆ ಸೇರುವ ಅವಕಾಶವನ್ನು ನೀಡಿರಲಿಲ್ಲ. ದಾವಣಗೆರೆ ಕಸಬಾ ಪರಿಸರದಲ್ಲಿ ಶಾಸನ ಆಡಳಿತಗಾರರ ಈ ಪದ್ಧತಿಯ ಬಳಕೆಯಲ್ಲಿ ಒಳಪಟ್ಟಿರಬಹುದು. ಈ ಕೆಟ್ಟ ಪದ್ಧತಿಗೆ ಹೆಚ್ಚಾಗಿ ರಾಣಿಯರು, ಶ್ರೀಮಂತ ಮಹಿಳೆಯರು ಹಾಗು ಕೆಳವರ್ಗದ ಮಹಿಳೆಯರು ಒಳಪಡುತ್ತಿದ್ದರು ಎನ್ನಬಹುದಾಗಿದೆ. ದಾವಣಗೆರೆ ಕಸಬಾ ಪರಿಸರದ ಉಚ್ಚಂಗಿದುರ್ಗ ಸುತ್ತಮುತ್ತ ದೇವದಾಸಿ ಪದ್ಧತಿಯು ಕಂಡು ಬರುತ್ತದೆ. ದೇವದಾಸಿಯರು ದೇವರ ಕಾರ್ಯಗಳನ್ನು ಮಾಡುವುದಕ್ಕೆ ಬಿಟ್ಟವರೆಂಬ ಕೆಟ್ಟ ಆಚಾರಣೆಯನ್ನು ನಡೆಸುವಂತೆ ಮೇಲ್ಜಾತಿಯವರು ನಂಬಿಸಿರುವುದು ಕಂಡು ಬರುತ್ತದೆ. ದೇವದಾಸಿಯರಲ್ಲಿ ಹೆಚ್ಚಾಗಿ ಕೆಳಜಾತಿಯ ಮಹಿಳೆಯರೇ ಹೆಚ್ಚು ಒಳಪಡುತ್ತಿದ್ದಾರೆ ಇವರು ಹೆಚ್ಚಾಗಿ ವೈಶ್ಯಾವೃತ್ತಿಗೆ ತೊಡಗಿರುವುದನ್ನು ತಿಳಿಯಬಹುದಾಗಿದೆ.

**ವೆಶ್ಯ ವೃತ್ತಿ**

ವೇಶ್ಯಾವೃತ್ತಿಯು ಬಹುಪಾಲು ಹಿಂದೆ ದೇವಸ್ಥಾನದ ಪ್ರದೇಶಗಳಲ್ಲಿ ಸೀಮತವಾಗಿತ್ತು. ಆ ಪ್ರದೇಶದಲ್ಲಿ ಕಾಮದ ಹಸಿದ ಪುರುಷರ ಅಗತ್ಯಗಳನ್ನು ದೈವಾಯುತ್ತ ಪದ್ಧತಿಯಾದ ದೇವದಾಸಿ

ಸಂಪ್ರದಾಯವು ಈಡೇರಿಸುತ್ತಿತ್ತು. ದೇವದಾಸಿ ಎಂದರೆ ದೇವರ ಸೇವಕರು. ಆದರೆ ವಾಸ್ತವದಲ್ಲಿ ಇದು ವೈಶ್ಯಾವೃತ್ತಿಯಾಗಿಯೇ ಕಂಡುಬರುತ್ತದೆ. ಪ್ರತಿಯೊಂದು ದೇವಸ್ಥಾನಗಳಲ್ಲಿ ಪವಿತ್ರ ಸ್ತ್ರೀಯರ ಒಂದು ಗುಂಪು ಇರುತ್ತಿತ್ತು. ಇವರ ಕರ್ತವ್ಯ ವಿಗ್ರಹಗಳ ಮುಂದೆ ನೃತ್ಯ ಮತ್ತು ಗಾಯನ ಮಾಡುವುದು ಅನಂತರ ಉನ್ನತ ವರ್ಗದ ಜನರನ್ನು ರಂಜಿಸುವುದಾಗಿತ್ತು. ಕೆಲವು ಸ್ತ್ರೀಯರು ಧಾರ್ಮಿಕ ಸಂಘದ ಕಟ್ಟಡಗಳಲ್ಲಿ ಏಕಾಂತತೆಯ ತಮ್ಮ ಜೀವನವನ್ನು ಕಳೆಯುತ್ತಿದ್ದರು ಹಾಗು ಹಣ ನೀಡುವ ಶ್ರೀಮಂತ ವ್ಯಕ್ತಿಗಳಿಗೆ ನಂತರ ದಿನಗಳಲ್ಲಿ ಅವರು ಸಂಪಾದನೆಯಲ್ಲಿ ಒಂದು ಅಂಶವನ್ನು ಪುರೋಹಿತರಿಗೆ ನೀಡಬೇಕಾಗಿತ್ತು. ಇವರು ಸಾರ್ವಜನಿಕ ಸಮಾರಂಭಗಳಲ್ಲಿ ಮತ್ತು ಖಾಸಗಿ ಕಾರ್ಯಕ್ರಮಗಳಲ್ಲಿ ನೃತ್ಯ ಮತ್ತು ಗಾಯನವನ್ನು ಮಾಡುತ್ತಿದ್ದರು.[೧೯]

ಒಂದು ಪವಿತ್ರ ಶಾಸನವು ಹೇಳುವಂತೆ ಕ್ರಿ.ಶ. ೧೦೦೪ ರಲ್ಲಿ ತಂಜಾವೂರಿನ ಚೋಳ ದೊರೆ ರಾಜರಾಜನ ದೇವಸ್ಥಾನದಲ್ಲಿ ನಾಲ್ಕನೂರು ದೇವದಾಸಿಯರಿದ್ದಂತೆ ಕಾಲಾನುಕ್ರಮದಲ್ಲಿ ಈ ಪದ್ಧತಿಯು ಪಾವಿತ್ರ್ಯವನ್ನು ಪಡೆದುಕೊಂಡಿತು. ಒಬ್ಬ ಮಗನನ್ನು ಪುರೋಹಿತರ ಹುದ್ದೆಗೆ ಹೇಗೆ ಮುಂಡಿಪಾಗುತ್ತಿತ್ತೋ ಅದೇ ಭಾವನೆಯಿಂದ ಗೌರವಾನ್ವಿತ ಮಹಿಳೆಯರು ಆಗಾಗ ಒಬ್ಬ ಮಗಳನ್ನು ದೇವಸ್ಥಾನದ ವೇಶ್ಯಾವೃತ್ತಿಯ ಕಸುಬಿಗೆ ಸಮರ್ಪಿಸುತ್ತಿದ್ದರು. ಹತ್ತೊಂಬತ್ತನೆಯ ಶತಮಾನದ ಆರಂಭಕಾಲದಲ್ಲಿ ದಕ್ಷಿಣದ ಕೆಲವು ದೇವಸ್ಥಾನಗಳು ಕೇವಲ ವೈಶ್ಯಾ ಚಟುವಟಿಕೆಗೆ ಆಗಿ ಪರಿವರ್ತನೆ ಆದವು ಎಂದು ಡೂಬಾಯ್ ತಿಳಿಸುತ್ತಾನೆ.

### ೪.೩ ಧಾರ್ಮಿಕ ಸ್ಥಿತಿಗಳು

ಪ್ರಾಚೀನ ದಾವಣಗೆರೆದಲ್ಲಿನ ಧಾರ್ಮಿಕ ಜೀವನವನ್ನು ನಾವು ಗಮನಿಸಿದಾಗ ಹಿಂದಿನಿಂದಲೂ ಹಲವಾರು ಧರ್ಮಗಳು ಬೆಳೆದು ಬಂದಿರುತ್ತವೆ. ಇಲ್ಲಿನ ಜನತೆಯ ಧಾರ್ಮಿಕ ಶ್ರದ್ಧೆ ಸಮನ್ವಯತೆ ಔದರ್ಯ ಹಾಗೂ ಇಲ್ಲಿನ ವಾತಾವರಣ ಪ್ರಾಚೀನ ಕಾಲದಿಂದಲೂ ಧಾರ್ಮಿಕ ನಂಬಿಕೆಗಳನ್ನು ಹಾಗೂ ಧರ್ಮಗಳನ್ನು ಆಕರ್ಷಿಸುತ್ತಿತ್ತು.[೨೦] ಸಾಮಾನ್ಯವಾಗಿ ಭಾರತದ ಧಾರ್ಮಿಕ ಪರಿಸ್ಥಿತಿಯ ಬೆಳವಣಿಗೆಯ ಗಮನಿಸಿದಾಗ ವೈದಿಕ 'ಧರ್ಮವೇ ಅತ್ಯಂತ ಪ್ರಾಚೀನ ಧರ್ಮವೆಂದು ತಿಳಿಯುತ್ತದೆ. ಹರಪ್ಪ ಸಂಸ್ಕೃತಿಯಲ್ಲಿ ಕಂಡು ಬರುವ ಹಲವಾರು ದೇವತಾ ಆಕೃತಿಗಳು ನಿರ್ದಿಷ್ಟ ಧರ್ಮ ಒಂದನ್ನು ಪ್ರತಿಬಿಂಬಿಸುತ್ತದೆ ಎಂದು ಹೇಳಲಾದರೂ ಅದರಲ್ಲಿ ಸ್ಪಷ್ಟತೆ ಕಂಡು ಬರುವುದಿಲ್ಲ. ಹೀಗಾಗಿ ವಿಭಿನ್ನ ಧಾರ್ಮಿಕ ಪಂಥಗಳು ವೈದಿಕ ಯುಗದಿಂದಲೇ ಬೆಳೆದವು. ವೈಷ್ಣವ, ಶೈವ, ಶಾಕ್ತ ಇವುಗಳು ಅತ್ಯಂತ ಪ್ರಾಚೀನ ನಂಬಿಕೆಗಳಾಗಿವೆ. ಕ್ರಿಪೂ. ೬ ಮತ್ತು ೫ನೇ ಶತಮಾನದಲ್ಲಿ ಉಗಮವಾದ ಜೈನ ಮತ್ತು ಬೌದ್ಧ ಧರ್ಮಗಳು ಕರ್ನಾಟಕ ಮತ್ತು ದಾವಣಗೆರೆ ಮತ್ತು ಸುತ್ತಮುತ್ತಲಿನ ಧಾರ್ಮಿಕ ಸಾಂಸ್ಕೃತಿಕ ಇತಿಹಾಸದಲ್ಲಿ ತಮ್ಮದೇ ಆದಂತಹ ಸ್ಥಾನಮಾನಗಳನ್ನು ಪಡೆದುಕೊಂಡು ಬೆಳವಣಿಗೆ ಹೊಂದಿದ್ದವು.

**ಬೌದ್ಧ ಧರ್ಮ**

ಪ್ರಾಚೀನ ಭಾರತೀಯ ಧರ್ಮಗಳಲ್ಲಿ ಒಂದು ಬೌದ್ಧ ಧರ್ಮವಾಗಿದೆ. ಜೀವನದ ಸಮಸ್ಯೆಗಳನ್ನು ಸಮರ್ಪಕವಾಗಿ ಪರಿಹರಿಸಿ ಕೊಳ್ಳಲು ಚಿತ್ತಸ್ಥೈರ್ಯ ಹಾಗೂ ಚಿತ್ತಶುದ್ಧಿಯ ಮಾರ್ಗ ಹುಡುಕುವ ಕಾತುರದಿಂದ ಬೆಳೆದು ಬಂದಿದೆ. ಈ ಮಾತಿಗೆ ಉತ್ತಮ ನಿದರ್ಶನ ಬೌದ್ಧಧರ್ಮ ಎಂದರೆ ಉತ್ತಮ ಸಾಧನೆ ಮನಸ್ಸಿನಿಂದ ತತ್ವವನ್ನು ಗ್ರಹಿಸುವುದಕ್ಕಿಂತ ಮನಸ್ಸನ್ನೆ ಬಿಗಿ ಹಿಡಿದು ಅದರ ಒಳಗಡೆ ಇರುವ ಶಾಂತಿಯ ಸುಖವನ್ನು ಹುಡುಕುವ ನಂಬಿಕೆಯಾಗಿದೆ.[೨೧] ಉತ್ತರ ಭಾರತದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದ ಈ ಧರ್ಮ ಕ್ರಮೇಣ ದಕ್ಷಿಣ ಭಾರತವಲ್ಲದೆ, ಸುತ್ತಮುತ್ತಲಿನ ದೇಶಗಳಲ್ಲೂ ವಿಸ್ತರಿಸಿತು. ಕರ್ನಾಟಕದಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಕೆಲವು ಆವಶೇಷಗಳು ದೊರೆತ್ತಿದ್ದರಿಂದ ಪ್ರಾಚೀನ, ಮಧ್ಯ ಕಾಲದಲ್ಲಿ ಇಲ್ಲಿಯೂ ಪ್ರಚಾರದಲ್ಲಿತ್ತೆಂದು ತೋರುತ್ತದೆ. ಕರ್ನಾಟಕದ ಸನ್ನತಿ, ಐಹೊಳೆ, ಕದರಿ, ಕೋಳಿವಾಡ, ತೋರ್ಕೆ, ಚಂದ್ರವಳ್ಳಿ, ಬಳ್ಳಿಗಾಮೆ, ಬನವಾಸಿ, ಡಂಬಳ ರಾಜಾಘಟ್ಟಾ ಮೊದಲಾದ ಸ್ಥಳಗಳು ಇದರ ಪ್ರಭಾವಕ್ಕೆ ಒಳಗಾಗಿದ್ದವು. ದಾವಣಗೆರೆಯ ಪರಿಸರದ ಬೌದ್ಧ ನೆಲೆಗಳೆಂದರೆ ಅಸಗಗೋಡು, ಶಾಮನೂರು, ಲೋಕಿಕೆರೆ, ನಾಗನೂರು. ದಾವಣಗೆರೆ ಕಸಬಾ ಪ್ರದೇಶಧ ಒಂದು ಭಾಗವಾಗಿರುವ ಶಾಮನೂರು ಭೌದ್ಧರು ನೆಲೆಸಿದ್ದ ಸ್ಥಳವಾಗಿತೆಂದು, ದಾವಣಗೆರೆ ೧೨ ಮೈಲು ದೂರದ ಲೋಕಿಕೆರೆಯ ಭೌದ್ಧರ ಅವಲೋಕಿಶ್ವರ ದೇವಾಲಯವನ್ನು ಗಮನಿಸಿದರೆ, ಭೌದ್ಧ ಮತಾವಲಂಬಿಗಳಾದ ಮೌರ್ಯರು ಆಳ್ವಿಕೆಯು ದಾವಣಗೆರೆ ಒಳಪಟ್ಟಿದ್ದಿತೆಂದು ತಿಳಿದು ಬರುತ್ತದೆ.

**ಶಾಮನೂರು** : ಶ್ಯಾಬ ಎಂದರೆ ಒಂದು ಜಿಂಕೆಯ ಮರಿ ಎಂದರ್ಥ. ಬುದ್ಧನು ಬೋಧಿಸುತ್ತಿದ್ದಾಗ ತಂಗಿದ್ದ 'ಮೃಗವನ' ಜಿಂಕೆಯ ತೋಪಿನ ಹೆಸರಿನಲ್ಲಿ ಜಿಂಕೆಗಳು ಹೆಚ್ಚಾಗಿ ವಾಸಿಸುತ್ತಿದ್ದ ಅಲ್ಲಿ ನಿರ್ಮಿತವಾದ ಊರಾಗಿರಬಹುದು. ಇಂದಿಗೂ ಇಲ್ಲಿ ಸುಂದರವಾದ ತೀರ್ಥಂಕರರ ಮೂರ್ತಿ ಕಾಣಬಹುದಾಗಿದೆ. ಆನೇಕ ಪ್ರಾಚ್ಯಾವಶೇಷಗಳು ಇಲ್ಲಿ ಕಂಡು ಬರುತ್ತವೆ. ಹಾಗಾಗಿ ಶಾಮನೂರಿನಲ್ಲಿ ಕೋಣನ ತಲೆಯ ಅತೀ ಪ್ರಾಚೀನ ಶಿಲ್ಪವಿದೆ. ಬಹಳಷ್ಟು ಬುದ್ಧಿವಂತರು, ಪ್ರಜ್ಞಾವಂತರು ಗ್ರಾಮಸ್ಥರು ಈ ಕೋಣನ ತಲೆಯ ಶಿಲ್ಪವನ್ನು ಕಾಪಾಡಿಕೊಂಡು ಬಂದಿದ್ದಾರೆ. ಶಿವನ ಪಂಚಮುಖದ ಮೂರ್ತಿ ಇಲ್ಲಿದೆ ಬ್ರಹ್ಮನ ಆರಾಧನೆಗೊಳ್ಳುತ್ತಿದ್ದುದ್ದಕ್ಕೆ ಇಲ್ಲಿ ಬ್ರಹ್ಮನ ಆರಾಧನಾ ನೆಲೆಗಳಿವೆ. ಅತೀ ಪ್ರಾಚೀನ ಸಂಸ್ಕೃತಿಯ ಕುರುಹುಗಳನ್ನು ಹೊಂದಿರುವ ಶ್ಯಾಮನೂರು ಅಂದಿನ ಶ್ಯಾಬನೂರು ಬೌದ್ಧ ನೆಲೆಗೆ ಸಾಕ್ಷಿಯಾಗಿದೆ.

**ಲೋಕಿಕೆರೆ** : ಬೌದ್ಧರ ಲೋಕನಾಥನಿಂದ ಹೆಸರು ಪಡೆದಿರುವ ಲೋಕಿಕೆರೆಯು ಚಾಲುಕ್ಯರ ಕಾಲದ ಸುಂದರವಾದ ದೇವಾಲಯವನ್ನು ಹೊಂದಿದೆ. ಲೋಕನಾಥನು ಪ್ರಸಿದ್ಧ ಭಿಕ್ಷುವಾಗಿದ್ದು ಆತನ ನೆಲೆಯಾಗಿರಬೇಕು. ಬೌದ್ಧ ಧರ್ಮದ ಪ್ರಚಾರಕರನ್ನು ಭಿಕ್ಷುಗಳೆಂದು ಕರೆಯುತ್ತಾರೆ.

ಲೋಕನಾಥನೆಂಬ ಬೌದ್ಧ ಧರ್ಮದ ಪ್ರಚಾರಕ ಭಿಕ್ಷು ಇಲ್ಲಿಗೆ ಬಂದು ಪ್ರಚಾರ ಮಾಡಿರಬೇಕು. ಆತನಿಂದಾಗಿ ಲೋಕಿಕೆರೆ ಎಂದಾಗಿರಬಹುದೆಂದು ಹುಲ್ಲೂರು ಶ್ರೀನಿವಾಸ ಜೋಯಿಸರು ಅಭಿಪ್ರಾಯ ಪಟ್ಟಿದ್ದಾರೆ. ಈ ಮೇಲಿನ ಗ್ರಾಮಗಳೂ ಸೇರಿದಂತೆ ತಾಲ್ಲೂಕಿನ ಎಲ್ಲಾ ಚರಿತ್ರೆಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ನಿಖರವಾದ ಚರಿತ್ರೆಯನ್ನು ಹೊರತರಬೇಕಾಗಿದೆ. ಇಲ್ಲಿ ಕೆಲವು ಗ್ರಾಮಗಳು ಶಿಲಾಶಾಸನದಿಂದ ಅಚಲೋಕೇಶ್ವರ ಎಂಬ ದೇವರ ಉಲ್ಲೇಖ ಬರುವುದರಿಂದ ಅಧ್ಯಯನ ನಡೆಯಬೇಕಾಗಿದೆ.[೨೨]

**ಜೈನಧರ್ಮ**

ಭಾರತದ ಪ್ರಮುಖ ಧಾರ್ಮಿಕ ಪಂಥವಾಗಿದೆ. ಹಿಂದೂ ಧರ್ಮದ ಸಮಾನ ತತ್ವಗಳು ಆಧಾರದ ಮೇಲೆ ವಿವಿಧ ವಿಧಾನಗಳು ಆರಂಭವಾಗುತ್ತಿದಂತೆ, ಇನ್ನೊಂದು ಕಡೆಯಲ್ಲಿ ಶ್ರೇಷ್ಟವಾದ ತತ್ವಗಳು ಅರ್ಥಹೀನ ಸಂಪ್ರದಾಯಗಳು ಸಮಾಜದಲ್ಲಿ ಬಲಿಷ್ಟವಾದವು. ಇದಕ್ಕೆ ಪ್ರತಿಯಾಗಿ ಸರಳ ಹೊಸ ಮಾರ್ಗಗಳನ್ನು ಕಂಡುಕೊಂಡ ಜೈನಧರ್ಮವು ಹುಟ್ಟಿಕೊಂಡಿತು.[೨೩] ಜೈನಧರ್ಮದ ಪ್ರಮುಖವಾದ ಸಂದೇಶವೆಂದರೆ ಆಹಿಂಸೆ. ಜೈನಧರ್ಮದ ಸ್ಥಾಪಕ ಋಷಭದೇವ. ಜೈನಧರ್ಮದ ಗ್ರಂಥಗಳ ಪ್ರಕಾರ ೨೪ ತೀರ್ಥಂಕರರಲ್ಲಿ ಋಷಭದೇವ ಮೊದಲೆಯವನ್ನು ಕೊನೆಯವನ್ನು ಮಹಾವೀರ. ೨೩ ನೇ ತೀರ್ಥಂಕರ ಪಾರ್ಶ್ವನಾಥ ೮ನೆ ಶತಮಾನದಲ್ಲಿದ ಐತಿಹಾಸಿಕ ವ್ಯಕ್ತಿಯಾಗಿದ್ದಾರೆ.

ಕ್ರಿ.ಶ. ಆರಂಭದ ಮೊದಲೇ ಕರ್ನಾಟಕವನ್ನು ಪ್ರವೇಶಿಸಿದ ಜೈನಧರ್ಮ ಹನ್ನೆರಡನೆಯ ಶತಮಾನಕ್ಕಾಗಲೇ ಆನೇಕ ದೇವಾಲಯಗಳಲ್ಲಿ ನಿರ್ಮಾಣ ಆಚರಣೆಗಳ ಮೂಲಕ ಕನ್ನಡ ನಾಡಿನ ಪ್ರಮುಖ ಮನೆತನಗಳ ರಾಜಾಶ್ರಯ ಪಡೆದುಕೊಂಡಿತು. ಚಂದ್ರಗುಪ್ತ ಮೌರ್ಯ, ಬಾಹುವಿನೊಡನೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದಾಗಿನಿಂದ ಇದರ ಪ್ರಾಚೀನತೆಯನ್ನು ಗುರುತಿಸಲಾಗಿದೆ. ಜೈನ ಧರ್ಮದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಎರಡು ಶಾಖೆಗಳು ಕಂಡು ಬರುತ್ತವೆ. ದಿಗಂಬರ ಪಂಥ ಕರ್ನಾಟಕದಲ್ಲಿ ಮೊದಲಿನಿಂದಲೂ ಪ್ರಚಾರದಲ್ಲಿತ್ತು. ಅದರಲ್ಲಿ ಸಂಘ, ಗಣ, ಗಚ್ಛ, ಅನ್ವಯ, ಬಳಿ ಎಂಬ ಭೇದಗಳಿದ್ದವೆ. ಇವುಗಳ ಸಂಬಂಧ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಜೀವನ ಮತ್ತು ಅನುಭವಗಳನ್ನು ಜೈನಧರ್ಮದ ದರ್ಶನವು ಆಧಾರವಾಗಿ ಆವಲಂಬಿಸಿದೆ. ಮೋಕ್ಷವೇ ಜೀವನದ ಪರಮೋದ್ದೇಶ ಅದನ್ನು ತ್ರಿವಿಧ ಪಥಗಳಿಂದ ಸಾಧಿಸಬಹುದು. ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ ಮತ್ತು ಸಮ್ಯಗ್ ಚಾರಿತ್ರ, ಜೀವನದ ಸಮಸ್ಯೆಗಳ ಬಗ್ಗೆ ಸರಿಯಾದ ಮಾರ್ಗದಲ್ಲಿ ನಡೆದರೆ ಪರಮ ಗುರಿಯನ್ನು ಮುಟ್ಟಬಹುದು ಎಂದು ನಂಬಿದ್ದಾರೆ. ಅನೇಕಾಂತವನ್ನು ಅಂದರೆ ಆನೇಕ ಮಾರ್ಗಗಳಿಂದ ಪರೀಕ್ಷಿಸಿ ನೋಡುವುದರಿಂದಲೇ ಗುರಿ ಸೇರುವುದಕ್ಕೆ ಸರಿಯಾದ ದೃಷ್ಟಿ ದೊರೆಯುತ್ತದೆ ಎಂಬುದು ಜೈನರ ನಂಬಿಕೆಯಾಗಿದೆ.[೨೪]

ಜೈನಧರ್ಮ ಗಂಗ-ಹೊಯ್ಸಳ ರಾಜ ಮನೆತನಗಳೊಂದಿಗೆ ಬೆಳೆಯಿತು. ಹೊಯ್ಸಳ ರಾಜ ವಿಷ್ಣುವರ್ಧನನ ರಾಣಿ ಶಾಂತಲೆಯು ಕ್ರಿ.ಶ. ೧೧೩೧ರಲ್ಲಿ ಶಿವಗಂಗೆಯಲ್ಲಿ ಸಲ್ಲೇಖನ ವ್ರತ ಕೈಗೊಂಡು ಪ್ರಾಣತ್ಯಾಗ ಮಾಡಿದಳೆಂದು ತಿಳಿದುಬರುತ್ತದೆ. ಶಾಂತಲೆಯು ಜೈನಮತ ಅವಲಂಬಿಯಾಗಿದ್ದಳು. ಅವಳು ಶ್ರವಣಬೆಳಗೊಳದಲ್ಲಿ ಕೆಲವು ಜೈನ ಬಸದಿಗಳನ್ನು ನಿರ್ಮಿಸಿದಳು. ಅವಳು ಶಿವಗಂಗೆಯನ್ನು ಸಲ್ಲೇಖನ ವ್ರತಕ್ಕೆ ಆರಿಸಿ ಕೊಂಡಿರುದಕ್ಕೆ ಪ್ರಾಯಶಃ ಅಂದು ಪ್ರಮುಖ ಜೈನಧರ್ಮದ ಚಟುವಟಿಕೆಗಳ ಅಗರವಾಗಿರಬೇಕೆಂದು ತೋರುತ್ತದೆ. ಹೀಗಾಗಿ ಜೈನಧರ್ಮ ಇನ್ನಿತರ ಸಮಕಾಲೀನ ಧರ್ಮಗಳ ಜೊತೆಯಲ್ಲಿ ಅಂದಿನ ಸಮಾಜದಲ್ಲಿ ಜೈನ ಸೆಟ್ಟಿಗಳು, ಕೆರೆಕಟ್ಟೆಗಳ ನಿರ್ಮಾಣ, ದೇವಾಲಯಗಳ ಜೀರ್ಣೋದ್ಧಾರ ಇತ್ಯಾದಿ ಜನಪರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡಿರುತ್ತಿದ್ದರು. ಜೈನಧರ್ಮ ಕದಂಬ ಗಂಗರ ಕಾಲದಿಂದಲೂ ಉಚ್ಛ್ರಾಯ ಸ್ಥಿತಿಯನ್ನು ಹೊಂದಿ ಬೆಳೆಯಿತು. ದಾವಣಗೆರೆ ಪರಿಸರದ ಆನೆಕೊಂಡ, ಬೇತೂರು, ಶಾಮನೂರು, ನಾಗನೂರು, ನೀಲಾನಹಳ್ಳಿಗಳು ಪ್ರಾಚೀನ ಜೈನ ಕೇದ್ರಗಳಾಗಿದ್ದಕ್ಕೆ ಆನೇಕ ಕುರುಹುಗಳನ್ನು ಹೊಂದಿ ತಮ್ಮ ಪ್ರಾಚೀನ ಗತ ವೈಭವವನ್ನು ತಮ್ಮ ಒಡಲಲ್ಲಿ ಇರಿಸಿಕೊಂಡು ಅಧ್ಯಯನಕಾರರಿಗೆ ಸಾಕ್ಷಿಗಳನ್ನು ನೀಡುತ್ತಾ ಬಂದ ಗ್ರಾಮಗಳಾಗಿವೆ. ಜೈನ ಮತವು ಸ್ವಲ್ಪ ಸುಧಾರಣೆಗೊಂಡು ಬೌದ್ಧ ಮತದ ರೂಪ ಪಡೆದುಕೊಂಡಿತು. ಈ ಮೇಲಿನ ಗ್ರಾಮಗಳು ಸಹಜವಾಗಿ ಬೌದ್ಧ ಮತದ ಕೇಂದಗಳಾಗಿ ಪ್ರಸಿದ್ಧಿಯಾದವು.

**ಶೈವ ಧರ್ಮ**

ಭರತಖಂಡದಲ್ಲಿ ಶೈವ ಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು, ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಸರ್ ಜಾನ್ ಮಾರ್ಷಲರು ಅಭಿಪ್ರಾಯದಂತೆ ಮೆಹೆಂಜೋದಾರೋ ಮತ್ತು ಹರಪ್ಪಗಳ ಅವಶೇಷಗಳಿಂದ ಶೈವಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಜೀವಂತಧರ್ಮವೆಂದು ಭಾವಿಸಬೇಕಾಗುತ್ತದೆಯೆಂದು ಅವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೇಳಿಕೊಂಡಿದಾರೆ.[೨೫]

ಶೈವಧರ್ಮವು ಮೊದಲಿನಿಂದಲೂ ಪ್ರಬಲ ಧರ್ಮವಾಗಿಯೇ ಇರುವುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ತಿಳಿದಿರುವ ವಿಚಾರ, ಸಿಂಧೂನದಿಯ ಬಯಲಿನ ಸೈಂದವ ಸಂಸ್ಕೃತಿ, ವೇದಗಳು, ಪುರಾಣಗಳು, ಶಿವನನ್ನು ಪರಿಚಯಿಸಿದೆ ಶಿವ ಪರವಾದ ಶೈವಧರ್ಮವೂ ವೇದ ಪುರಾಣಗಳಷ್ಟೇ ಪ್ರಾಚೀನವಾದದ್ದು. ಶೈವ ಧರ್ಮದಲ್ಲಿ ಲಂಕುಳೀಶ (ಲಾಕುಳ) ಪಾಶುಪತ, ಕಾಳಾಮುಖ, ಕಾಪಾಲಿಕ ಇತ್ಯಾದಿ ಪಂಥಗಳಿದ್ದುವು, ಶಕ್ತಿ ಪರ್ಷೆ ಮತ್ತು ಸಿಂಹಪರ್ಷೆಗಳೆಂಬ ಎರಡು ಪಂಗಡಗಳಿದ್ದವು. ಇವುಗಳಲ್ಲಿ ಪ್ರತ್ಯೇಕ ಶಾಖೆಗಳಿದ್ದುವು.[೨೬] ಅವೇ ಅಮ್ನಾಯ ಅಥವಾ

ಆವಳಿಗಳು ಮುಖ್ಯವಾದವು ಪರ್ವತಾವಳಿ ಮತ್ತು ಭುಜಂಕಗಾವಳಿ ಇವುಗಳಲ್ಲಿ ಇಟ್ಟಿಗೆಯ ಸಂತತಿ ಮೂಲಕ ಕೋಟೆಯ ಸಂತಿತಿ ಇತ್ಯಾದಿ ಉಪಶಾಖೆಗಳಿದ್ದವು.

ವಿವೇಕ ಚಿಂತಾಮಣಿಯು ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರ ಶೈವ, ಪ್ರವರ ಶೈವ, ಅಂತರ ಶೈವ, ಎಂಬ ಏಳು ವಿಧದ ಶೈವರನ್ನು ಉಲ್ಲೇಖಿಸಿದೆ, ಅನುಸರಿಸುವ ದೇವತೆಯರನ್ನು ಲಕ್ಷದಲ್ಲಿಟ್ಟುಕೊಂಡು ಶೈವರನ್ನು ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ ಎಂದು ನಾಲ್ಕು ಭಾಗ ಮಾಡಲಾಗಿದೆ. ಶಕ್ತಿ ಪರವಾದುದು ವಾಮ, ಬೈರವಪರವಾದುದು ದಕ್ಷಿಣ, ಸಪ್ತಮಾತೃಕಾ ಪರಮವಾದುದು ಮಿಶ್ರ ಮತ್ತು ಶಿವ ಪರವಾದದು ಸಿದ್ಧಾಂತ ಆಚರಣೆಗಳ ಪ್ರಕಾರ ಸಾಮಾನ್ಯ ಶೈವ, ಮಿಶ್ರ ಶೈವ, ಶುದ್ಧ ಶೈವ, ವೀರ ಶೈವ ಎಂಬ ನಾಲ್ಕು ವಿಧಗಳಾಗಿವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೆಚ್ಚಾಗಿ ಶಿವದೇವಾಲಯಗಳು ನಿರ್ಮಾಣಗೊಂಡಿವೆ ಮತ್ತು ಅದಕ್ಕೆ ಕಾಳಮುಖ ಗುರುಗಳೇ ಕಾರಣ ಎನ್ನಬಹುದಾಗಿದೆ. ಶೈವ ಧರ್ಮವು ಉಚ್ಚಕಾಯ ಸ್ಥಿತಿಯಲ್ಲಿದ್ದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಬಹುತೇಕ ಶಿವ ದೇವಾಲಯಗಳು ಜನತೆಯ ಸಾಂಸ್ಕೃತಿಕ ಬೆಳವಣಿಗೆಗೆ ಶ್ರಮಿಸಿರುವುದನ್ನು ಶಾಸನಗಳಿಂದ ನೋಡಬಹುದಾಗಿದೆ.

**ದಾವಣಗೆರೆ ಪರಿಸರದಲ್ಲಿ ಕಾಳಮುಖ ಪರಂಪರೆ**

ಭಾರತದಲ್ಲಿರುವ ಹಲವು ಧರ್ಮ ಪಂಥಗಳಲ್ಲಿ ಶೈವಧರ್ಮ ಪ್ರಧಾನವಾಗಿದ್ದು, ಅತ್ಯಂತ ಪ್ರಾಚೀನವಾಗಿದೆ. ಶೈವ ಧರ್ಮದ ಕವಲುಗಳಲ್ಲಿ ಕಾಳಾಮುಖ ಶೈವ ಎಂಬ ಶಾಖೆ ಪ್ರಮುಖವಾಗಿದೆ. ಸುಮಾರು ೫ ರಿಂದ ೧೪ನೇ ಶತಮಾನದವರೆಗೆ ಕರ್ನಾಟಕ ಮತ್ತು ಸುತ್ತಮುತ್ತ ಪರಿಸರದಲ್ಲಿ ವ್ಯಾಪಿಸಿರಬಹುದು. ಮಧ್ಯಯುಗದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಏಕೈಕ ಪಂಥವಾಗಿದೆ. ಕಾಳಾಮುಖರ ಕುರಿತು ಮೊಟ್ಟಮೊದಲು 'ಸ್ಕಂದ ಪುರಾಣ' ಮತ್ತು ವಾಮನ ಪುರಾಣದಲ್ಲಿ ಉಲ್ಲೇಖ ದೊರೆಯುತ್ತದೆ.

ಕಲಾ ಶಬ್ದದಿಂದ ಕಲಾ, ಕಾಳಾ, ಕಾಳಾಮುಖ ಬಂದಿದ್ದು, ಶಿವನ ಐದು ಮುಖದಿಂದ ಪಂಚ ಕಲೆಗಳು. ಈ ಪಂಚಕಲೆಗಳನ್ನು ಯಾರು ಅನುಷ್ಠಾನ ಮಾಡುವರೋ ಅವರೇ ಕಾಳಾಮುಖರು. ಈ ಹಿನ್ನೆಲೆಯಲ್ಲಿ ಶಿವನ ಐದು ಮುಖಗಳುಳ್ಳ ಮುಖಲಿಂಗ ವಿಗ್ರಹವು ನಮಗೆ ಮಹಾಕೂಟದ ವಿಷ್ಣು ಪುಷ್ಕರಣಿಯಲ್ಲಿ ದೊರೆಯುತ್ತದೆ. ಶಿವನ ಸರ್ವವ್ಯಾಪ್ತಿಯನ್ನು ಲಿಂಗದಲ್ಲಿ ಸಂಕೇತಿಸಲಾಗಿದೆ. ಪುರಾಣ ಕತೆಗಳ ಹಿನ್ನೆಲೆಯಲ್ಲಿ ಶಿವ ಮತ್ತು ಶಕ್ತಿಯಾದ ಸಂಗಮ ಕ್ಷೇತ್ರವಾದ ಮಹಾಕೂಟವು ಕಾಳಾಮುಖರ ಪ್ರಾರಂಭಿಕ ಚಟುವಟಿಕೆಯ ಕುರುಹು ನೀಡುತ್ತದೆ.[೨೭]

ಕಾಳಾಮುಖ ಪರಂಪರೆಯ ಬಗ್ಗೆ ವಿದ್ವಾಂಸದ ಅಭಿಪ್ರಾಯಗಳು.

ಅ. ಸುಂದರ ಅವರ ಪ್ರಕಾರ : ಕಾಳಾಮುಖರು ಕಟ್ಟಾ ಶೈವ ಧರ್ಮಿಗಳು ಮತ್ತು ಉದ್ದಾಮ ಪಂಡಿತರು. ಶಿವನ ಹಾಗೂ ಶಕ್ತಿಯ, ಭೈರವ ಮತ್ತು ಮಹಾಕಾಳಿಯ ಅವತಾರಗಳ ನಿಷ್ಠಾವಂತ ಆರಾಧಕರು. ಇವರ ಪೂಜಾವಿಧಾನ ಹಾಗೂ ಧಾರ್ಮಿಕ ಜೀವನ ಸಾಮಾನ್ಯ ಜನರಿಗೆ ಕಠಿಣವಾಗಿದ್ದರಿಂದ ಹಿಡಿಸುತ್ತಿರಲಿಲ್ಲ, ಇಂದ್ರೀಯ ನಿಗ್ರಹವನ್ನು ಸಾಧಿಸಿದವನಿಗೆ ಮಾತ್ರ ಇವರ ಮಾರ್ಗ ಸಾರಿ ಹೋಗುತ್ತದೆ.

ಆ. ಎಂ.ಎಚ್. ಕೃಷ್ಣ ರವರ ಪ್ರಕಾರ : ವೇದ ಮತಾನುಯಾಯಿಗಳಾದ ಬ್ರಾಹ್ಮಣರೇ ಕಾಳಾಮುಖರು. ಇವರು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದರು.

ದಾವಣಗೆರೆ ತಾಲ್ಲೂಕಿನ ಭೌಗೋಳಿಕ ಪ್ರದೇಶವನ್ನು ಕದಂಬರಿಂದ ಹಿಡಿದು ಚಿತ್ರದುರ್ಗ ಪಾಳೆಯಗಾರರವರೆಗೆ ಅನೇಕ ರಾಜಮನೆಗಳು ಆಳ್ವಿಕೆ ನಡೆಸಿದ್ದು ಕಾಳಾಮುಖ ಪರಂಪರೆಯ ಯತಿಗಳು ರಾಜಾಶ್ರಯದ ಜನರ ಆಶ್ರಯದ ಧಾರ್ಮಿಕ ಕೇಂದ್ರಗಳಲ್ಲಿ ಸ್ಥಾನಚಾರ್ಯರಾಗಿ ಸ್ಥಪತಿಗಳಾಗಿ ಗುರು ಪಂಡಿತರಾಗಿ ಕಾಳಾಮುಖ ಪರಂಪರೆಯನ್ನು ನಡೆಸಿಕೊಂಡು ಬಂದಿರುವುದನ್ನು ಶಾಸನಗಳು ಮತ್ತು ಇತರೆ ಆಕರಗಳು ದೃಢಪಡಿಸುತ್ತವೆ. ಉಚ್ಚಂಗಿಪಾಂಡ್ಯರ ಉಪ ರಾಜಧಾನಿಯಾದ ಬೇತೂರು, ಆನೆಕೊಂಡ, ಅವರಗೊಳ್ಳ, ಕಕ್ಕರಗೊಳ್ಳ, ಅಣಜಿ, ದಾವಣಗೆರೆ ನಗರ ಸೇರಿದಂತೆ ಅನೇಕ ಸ್ಥಳಗಳಲ್ಲಿ ಕಾಳಾಮುಖ ಪರಂಪರೆಗಳು ಕಂಡುಬರುತ್ತದೆ. ಕ್ರಿಶ. ೧೦ನೇ ಶತಮಾನದಿಂದ ೧೩ನೇ ಶತಮಾನದವರೆಗೆ ಕಾಳಾಮುಖ ಪರಂಪರೆ ಚಟುವಟಿಕೆಗಳು ತಾಲ್ಲೂಕಿನ ಭೌಗೋಳಿಕ ಪ್ರದೇಶದಲ್ಲಿ ಗಮನಿಸಬಹುದಾಗಿದೆ.[೨೮]

ದಾವಣಗೆರೆ ಸಮೀಪದ ಹಿರೇಮೇಗಳಗೆರೆ ಶಾಸನದಲ್ಲಿ ಬರುವ ಮೂರುಜಾವಿ ದೇವನ ಉಲ್ಲೇಖವಿದೆ. ಕ್ರಿಶ. ೧೦೫೯ರ ಶಾಸನದಲ್ಲಿ ಉಲ್ಲೇಖಿತ ಮೂರುಜಾವಿ ದೇವ ಅತ್ಯಂತ ಪ್ರಾಚೀನ ಮತ್ತು ಮೊದಲನೆಯವನು. ಈ ಯತಿಯು ಸ್ವಯಂಭೂ ತ್ರಿಕೋಟೇಶ್ವರ ದೇವರ ಆಚಾರ್ಯ ಮತ್ತು ಅರಿಯ ದೇವರ ಶಿಷ್ಯನೆಂದು ತಿಳಿದು ಬರುತ್ತದೆ. ಉಚ್ಚಂಗಿ – ೩೦ರ ಬಳಿಯ ಕಾಡವಾರ ಹಳ್ಳಿ ಉತ್ತರದಿಕ್ಕಿನ ಭೂಮಿಯನ್ನು ದಾನ ಪಡೆದಿದ್ದಾನೆ. ಎರಡನೆ ಮೂರು ಜಾವಿದೇವನ ಉಲ್ಲೇಖ ಕ್ರಿಶ. ೧೧೭೪ರ ರಟ್ಟಿಹಳ್ಳಿ ಶಾಸನಗಳಲ್ಲಿ ಬರುತ್ತದೆ. ಮೂರನೆ ಮೂರು ಜಾವಿದೇನ ಕ್ರಿಶ. ೧೫೦೭ರ ಕಲ್ಕೇರಿ ಶಾಸನದಲ್ಲಿ ಸ್ವಯಂ ಭೂ ಸೋಮನಾಥ ದೇವರ ದೇವಾಲಯದ ನಿರ್ವಹಣೆಗಾಗಿ ಮೂರುಜಾವಿದೇವ ವಂಶ ಪರಂಪರೆಯವನೆ ಆಗಿದ್ದು, ಕಾಳಾಮುಖ ಪರಂಪರೆಗೆ ಸೇರಿದವರಾಗಿದ್ದಾರೆ. ಕಮ್ಮಾರಗಟ್ಟೆಯಲ್ಲಿರುವ ಪಾರ್ಶ್ವನಾಥೇಶ್ವರ ದೇವಾಲಯದ ಪರಿಸರ ಕಾಳಾಮುಖರ ಪ್ರದೇಶವಾಗಿರಬಹುದೆನೋ ಎಂದು ನೀಡುತ್ತದೆ.

**ವೈಷ್ಣವ ಧರ್ಮ**

ವೈಷ್ಣವ ಧರ್ಮವು ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಪ್ರಾಚೀನ ನಂಬಿಕೆಗಳು ಮತ್ತು ಆಚರಣೆಗಳು ವೈದಿಕ ಧರ್ಮದ ಮೇಲೆಯೇ ಬೆಳೆಯುತ್ತದೆ. ಈ ಧರ್ಮದ ಅಂಗಗಳಾಗಿ ಶೈವ, ವೈಷ್ಣವ ಧರ್ಮಗಳು ಬೆಳೆದು ಭಾರತದ ಪ್ರಾಚೀನ ಜನರ ನಂಬಿಕೆಗಳಿಗೆ ಪೂರಕವಾಗಿ ಹಲವಾರು ದೇವಾಲಯಗಳ ನಿರ್ಮಾಣಕ್ಕೆ ಸಹಾಯ ಮಾಡಿಕೊಟ್ಟಿದೆ.[೨೯] ಶೈವಧರ್ಮದಲ್ಲಿ ಶಿವನೇ ಪ್ರಮುಖ ಆರಾಧ್ಯ ದೇವರು ಹಾಗೆ ವೈಷ್ಣವ ಧರ್ಮದಲ್ಲಿ ವಿಷ್ಣುವೇ ಪ್ರಮುಖ ಆರಾಧ್ಯ ದೇವರು. ಶೈವ ಧರ್ಮದಲ್ಲಿ ಗಮನಾರ್ಹ ಬದಲಾವಣೆ ಕಂಡುಬಂದ ಸಂದರ್ಭದಲ್ಲಿ ಕರ್ನಾಟಕದಲ್ಲಿ ವೈಷ್ಣವ ಧರ್ಮವು ಉತ್ತಮವಾದ ಬೆಳವಣಿಗೆ ಹೊಂದಿದೆ. ಈ ಮೊದಲು ಇದ್ದ ವೈಷ್ಣವ ಧರ್ಮಕ್ಕೆ ಹೊಸರೂಪ ಕಂಡು ಬರುತ್ತದೆ. ಕ್ರಿ.ಶ. ೧೧ ಮತ್ತು ೧೨ ನೆಯ ಶತಮಾನಗಳಲ್ಲಿ ಆದರೆ ವೈಷ್ಣವ ಪರ ಚಟುವಟಿಕೆಗಳು ಹೊಯ್ಸಳರ ಆಳ್ವಿಕೆಯ ವ್ಯಾಪ್ತಿಯ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದ್ದುದು ಗಮನಾರ್ಹವಾಗಿದೆ. ಕ್ರಿ.ಶ. ೫೭೮ರ ವೇಳೆಗಾಗಲೇ ಬಾದಾಮಿಯಲ್ಲಿ ವೈಷ್ಣವ ಗುಹೆಯು ನಿರ್ಮಾಣವಾಗಿತ್ತು. ಬಾದಾಮಿಯ ಶಾಸನವು ಮಂಗಲೀಶನನ್ನು ಪರಮಭಾಗವತನೇದೇ ಸಂಬೋಧಿಸಿದೆ.

**ಇಸ್ಲಾಂಧರ್ಮ**

ಮೂಲಭೂತವಾಗಿ ಏಕೇಶ್ವರ ವಾದದ ಆಧಾರದ ಮೇಲೆ ನಿಂತಿರುವಂತಹ ಒಂದು ಧರ್ಮವಾಗಿದೆ. ದೇವರು (ಅಲ್ಲಾ) ಪೈಗಂಬರರ (ದೇವುದೂತರ) ಮೂಲಕ ತನ್ನನ್ನು ಜಗತ್ತಿನ ಮಾನವರಿಗೆ ತಿಳಿಸಲು ಕಳಿಸಿದ್ದಾನೆ ಎಂದು ಜನರು ನಂಬಿದ್ದಾರೆ.[೩೦] ಮುಸಲ್ಮಾನರ ಪವಿತ್ರವಾದ ಗ್ರಂಥ 'ಕುರಾನ್' ಇದು ದೇವರ ಇಚ್ಛೆಯನ್ನು ತಿಳಿದು 'ಇಸ್ಲಾಂ' ಎಂಬ ಹೆಸರು ದೇವರಿಗೆ ಪೂರ್ಣ ಶರಣಾಗುವುದರಿಂದ ದೊರೆತ ಶಾಂತಿ ಎಂದು ಮಹಮ್ಮದೀಯರು ವಿವರಿಸಿದ್ದಾರೆ. ಇಸ್ಲಾಂ ಧರ್ಮದ ಪ್ರಕಾರ ದೇವರು ಸೃಷ್ಟಿಯ ಜೊತೆಗೆ ಮನುಷ್ಯನಿಗೆ ತನ್ನನ್ನು ಅರಿತುಕೊಳ್ಳುವ ಹಾದಿಯನ್ನು ದಯಪಾಲಿಸಿದ್ದಾನೆ.

**ಕ್ರೈಸ್ತಧರ್ಮ**

ಪ್ರಪಂಚದ ಪ್ರಮುಖ ಧರ್ಮಗಳಲ್ಲಿ ಕ್ರೈಸ್ತಧರ್ಮವು ಒಂದಾಗಿದೆ. ಬೇರೆ ಬೇರೆ ಸಾಂಸ್ಕೃತಿಕ ಹಿನ್ನೆಲೆಗಳಿವ ಜನಾಂಗಗಳ ಮಧ್ಯೆ ಇರುವ ಈ ಧರ್ಮದಲ್ಲಿ ತಾತ್ವಿಕ ಏಕತೆ ಕಂಡು ಬರುತ್ತದೆ. ಕ್ರೈಸ್ತಧರ್ಮದ ಸಂಸ್ಥಾಪಕ ಯೇಸುಕ್ರಿಸ್ತ. ಮಾನವ ಕುಲಕ್ಕೆ ಆತ ತೋರಿದ ರಕ್ಷಣಾಮಾರ್ಗ ಅಂಶಗಳ ಮೇಲೆ ಈ ಕ್ರೈಸ್ತಧರ್ಮ ನಿಂತಿದೆ. ಭಾರತಕ್ಕೆ ಕ್ರೈಸ್ತಧರ್ಮದ ಪ್ರಚಾರ ಕಾರ್ಯ ಮೂರು ಸಮುದ್ರ ತೀರದ ಮೂಲಕ ಆರಂಭವಾಯಿತು ಎಂದು ಹೇಳಬಹುದು. ಭಾರತದಲ್ಲಿ ಮೊದಲನೆ

ಶತಮಾನದಲ್ಲೇ ಕ್ರೈಸ್ತಧರ್ಮ ಪ್ರಾರಂಭವಾಯಿತು. ದೇಶದ ಬಡತನ ಸಾಮಾಜಿಕ. ಆರ್ಥಿಕ ಕಷ್ಟಗಳಿಗೆ ನಾನಾ ವಿಧವಾಗಿ ಕ್ರೈಸ್ತಧರ್ಮ ಆಸ್ಪತ್ರೆಗಳು, ಅನಾಥಾಲಯಗಳು, ಶಾಲೆಗಳು, ವಿಶ್ವವಿದ್ಯಾಲಯಗಳು ಇನ್ನೂ ಅನೇಕ ಸೇವೆ ಮಾಡುತ್ತಾ ತನ್ನ ಪ್ರಚಾರ ಕಾರ್ಯ ಆರಂಭಿಸಿತು.[೩೧]

ಭಾರತ ದೇಶವು ಜಾತ್ಯಾತೀತ ರಾಷ್ಟ್ರವೆಂದು ಕರೆಯಿಸಿಕೊಳ್ಳುತ್ತಿದೆ. ಇಲ್ಲಿ ಎಲ್ಲಾ ಧರ್ಮದ ಜನರು ಬಾಳಿ ಬದುಕುವುದಕ್ಕೆ ಸಂವಿಧಾನಾತ್ಮಕ ಅವಕಾಶ ನೀಡಿದೆ. ಇದಕ್ಕೆ ಕರ್ನಾಟಕ ಹೊರತಗಿಲ್ಲ. ಕರ್ನಾಟಕದಲ್ಲಿ ಧರ್ಮಸಹಿಷ್ಣುತೆ ಹೆಚ್ಚಾಗಿ ಕಂಡುಬರುತ್ತದೆ. ಸ್ವಧರ್ಮ ಪ್ರತಿಪಾದನೆಯಲ್ಲಿ ಕರ್ನಾಟಕವು ತೊಡಗಿದ್ದು ಈ ಹಿಂದೆ ತಿಳಿದು ಬರುತ್ತದೆ. ಪ್ರಮುಖವಾಗಿ ವೀರಶೈವ ಧರ್ಮವನ್ನು ಹೆಸರಿಸಬಹುದು. ಇದೇ ರೀತಿ ಕ್ರೈಸ್ತಧರ್ಮವು ಇಂದು ಪ್ರಚಾರಗೊಂಡು ಪ್ರಮುಖ ಧರ್ಮಗಳಲ್ಲಿ ಒಂದಾಗಿದೆ. ಕ್ರೈಸ್ತಧರ್ಮದ ಪ್ರಮುಖ ಪಂಗಡಗಳಾದ ರೋಮನ್, ಕ್ಯಾಥೋಲಿಕ್ ಹಾಗೂ ಪ್ರೊಟಸ್ಟೆಂಟ್ ಪಂಗಡಗಳು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಂಡುಬರುವಂತೆ ದಾವಣಗೆರೆ ಜಿಲ್ಲೆಯಲ್ಲಿ ಮತ್ತು ತಾಲೂಕಿನಲ್ಲಿಯೂ ಸಾಕಷ್ಟು ಜನ ಹಾಗೂ ಚರ್ಚ್‌ಗಳು ಕಾಣಬಹುದು.

ದಾವಣಗೆರೆ ತಾಲ್ಲೂಕಿನಲ್ಲಿ ಕೋಲ್ಕುಂಟೆಯಲ್ಲಿ ೧೯೨೨ ರಲ್ಲಿಯೇ ಕ್ರೈಸ್ತಧರ್ಮ ಪ್ರಾರಂಭವಾದ ಬಗ್ಗೆ ಇತಿಹಾಸ ತಿಳಿಸುತ್ತದೆ. ಈ ಸಮಯದಲ್ಲಿ ಕ್ರೈಸ್ತ ಮಿಷನರಿಗಳು ಕೋಲ್ಕುಂಟೆಯನ್ನು ಪ್ರಮುಖ ಕೇಂದ್ರವಾಗಿ ಮಾಡಿಕೊಂಡು, ದಾವಣಗೆರೆಯ ಸುತ್ತಮುತ್ತ ಪ್ರದೇಶಗಳಲ್ಲಿ ಧರ್ಮ ಪ್ರಚಾರವನ್ನು ಕೈಗೊಂಡು ಬಂದಿದ್ದಾರೆ. ೧೯೩೨ ರಲ್ಲಿ ಬಾತಿಯಲ್ಲಿಯೂ ಕ್ರೈಸ್ತಧರ್ಮದ ಅಸ್ತಿತ್ವ ಕಂಡುಬರುತ್ತದೆ. ಪ್ರೊಟಸ್ಟೆಂಟ್‌ರ ಕ್ರೈಸ್ತರ ದೇವಾಲಯವು ಹಳೇ ದಾವಣಗೆರೆಯಲ್ಲಿ ೧೯೩೬ರಲ್ಲಿ ಶ್ರೀಮತಿ ಜಾರ್ಜ್ ಕೆಲ್ ರವರ ಹಸ್ತದಿಂದ ಪ್ರತಿಷ್ಠಾಪನೆಗೊಂಡು ೨೦೧೧ರಲ್ಲಿ ತನ್ನ ಅಮೃತ ಮಹೋತ್ಸವನ್ನು ಆಚರಿಸಿಕೊಂಡಿದೆ. ಈ ದೇವಾಲಯದ ಫಾದರ್ ಆಗಿ ಡ್ಯಾನಿಯಲ್ ಹೊನ್ನಾಯಕರ್ ರವರು ಸೇವೆ ಸಲ್ಲಿಸುತ್ತಿದ್ದಾರೆ.

ದಾವಣಗೆರೆ ತಾಲೂಕು ಮಟ್ಟದಲ್ಲಿ ಹೇಳುವುದಾದರೆ ಪಟ್ಟಣದಲ್ಲಿ ಕ್ಯಾಥೋಲಿಕ್ ಚರ್ಚ್ ಅಸ್ತಿತ್ವದಲ್ಲಿ ಕಂಡುವರುತ್ತದೆ. ಇದರಿಂದಾಗಿ ದಾವಣಗೆರೆಯ ಕೆ.ಅರ್.ನಗರದ ರಸ್ತೆಯಲ್ಲಿರುವ ಚರ್ಚ್ ಆಫ್ ಸೌತ್ ಇಂಡಿಯಾ ಸಂಸ್ಥೆಯಿಂದ ಚಿಯೋನ್ ಕ್ರೈಸ್ರ ದೇವಾಲಯ ಕಾಣಬಹುದಾಗಿದೆ. ನಗರದಲ್ಲಿ ಈ ಎರಡು ಚರ್ಚ್‌ಗಳು ಹಲವು ಇತಿಹಾಸವನ್ನು ಹೊಂದಿದೆ. ಈ ಚರ್ಚ್‌ನಲ್ಲಿರುವ ರಾಬರ್ಟ್ ಗುರುಗಳು ಹೇಳುವಂತೆ ಕ್ರಿ.ಶ.೧೯೩೭ ರಿಂದ ಪ್ರಾರಂಭಗೊಂಡು ಮೊದಲು ಕೆಲವೇ ಕುಟುಂಬಗಳನ್ನು ಹೊಂದಿತ್ತು. ಆದರೆ ಈಗ ಸಾವಿರಾರು ಕುಟುಂಬಗಳನ್ನು ಹೊಂದಿದೆ. ದಾವಣಗೆರೆಯಲ್ಲಿ ೧೫ ಚರ್ಚ್‌ಗಳು ಕಂಡುಬರುತ್ತವೆ. ಹಾಗೂ ಕೆಲವು ಕಡೆಗಳಲ್ಲಿ ಬೇರೆ ಸ್ಥಳ ಹಾಗೂ ಮನೆಗಳಲ್ಲಿ ಪ್ರಾರ್ಥನೆಯನ್ನು ನಡೆಸಲಾಗುತ್ತದೆ. ಬಾತಿ, ಆವರಗೆರೆ, ಮಾಯಕೊಂಡ, ಶ್ಯಾಗಲೆ ದಾವಣಗೆರೆ ಈ ಪರಿಸರದ ಚರ್ಚ್‌ಗಳಲ್ಲಿ ಇಂದಿಗೂ ಭಾನುವಾರದ ಆರಾಧನೆಯನ್ನು ನಡೆಸುತ್ತವೆ.

## ೪.೪ ಆರ್ಥಿಕ ವ್ಯವಸ್ಥೆ

ಪ್ರಾಚೀನ ಕಾಲದಲ್ಲಿ ಒಂದು ರಾಜ್ಯ ಅಥವಾ ಸಾಮ್ರಾಜ್ಯದ ಆಡಳಿತವು ಉತ್ತಮವಾಗಿದೆ ಎಂದರೆ ಅಲ್ಲಿ ಆರ್ಥಿಕ ಸ್ಥಿತುಯೂ ಉತ್ತಮ ಮಟ್ಟದಲ್ಲಿದೆ ಎಂದರ್ಥ, ಆಡಳಿತ ಅವ್ಯವಸ್ಥೆಯಿಂದ ಕೂಡಿದ್ದರೆ ಅದು ಆರ್ಥಿಕತೆಯಿಂದ ಬಳಲುತ್ತಿದೆ ಎಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಪ್ರಾಚೀನ ಅರಸರು ಸಾಮ್ರಾಜ್ಯ ವಿಸ್ತರಣೆಯ ಜೊತೆಗೆ ಆರ್ಥಿಕತೆಗೂ ಗಮನ ಹರಿಸುತ್ತಿದ್ದುದು ಚರಿತ್ರಾರ್ಹ ಕೌಟಿಲ್ಯನು ತನ್ನ ಸಪ್ತಾಂಗ ಸಿದ್ಧಾಂತದಲ್ಲಿ ಕೋಶವನ್ನು ಕುರಿತು ಹೇಳುತ್ತಾನೆ. ಈತನು ಸದೃಢ ಸಾಮ್ರಾಜ್ಯಕ್ಕೆ ಹಣವೇ ಮೂಲ ಎಂಬುದಾಗಿ ತಿಳಿಸುತ್ತಾನೆ. ಆರ್ಥಿಕತೆಯಲ್ಲಿ ಕೃಷಿ ಕೈಗಾರಿಕೆ, ಉತ್ಪನ್ನ, ವ್ಯಾಪಾರ, ವಾಣಿಜ್ಯ, ವೃತ್ತಿ ಸಂಘಗಳು, ಅಳತೆ, ತೂಕ ಮತ್ತು ನಾಣ್ಯಗಳು ಪ್ರಮುಖ ಅಂಶಗಳಾಗಿವೆ. ಇಲ್ಲಿನ ಆರ್ಥಿಕ ಸ್ಥಿತಿಗತಿಯನ್ನು ತಿಳಿಯಲು ಶಾಸನಾಧಾರಗಳೇ ಪ್ರಮುಖವಾಗಿವೆ.

**ಕೃಷಿ** : ಪ್ರಾಚೀನ ಕಾಲದ ಆರ್ಥಿಕ ಪರಿಸ್ಥಿತಿ ಅಂದಿನ ಕೃಷಿ ಚಟುವಟಿಕೆಯಾಗಿದೆ. ವ್ಯಾಪಾರ ಮತ್ತು ವಿಭಿನ್ನ ಉದ್ಯೋಗಗಳನ್ನು ಅವಲಂಬಿಸಿಕೊಂಡು ಬೆಳೆದಿರುತ್ತದೆ. 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೇಯೆ ಮೇಲು ಮೇಟಿಯಂ ರಾಟಿ ನಡೆದುದಲ್ಲದೆ ದೇಶದಾಟವೆ ಕೆಡಗು ಸರ್ವಜ್ಞ" ಎಂಬ ಸರ್ವಜ್ಞನ ಈ ವ್ಯಾಖ್ಯೆಯಿಂದ ಕೃಷಿಯ ಪ್ರಾಮುಖ್ಯತೆ ಎತ್ತಿ ತೋರಿಸುತ್ತಾದೆ. ಪ್ರಾಚೀನ ಕಾಲದ ಮಾನವನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದು ಕಡೆ ನೆಲೆ ನಿಲ್ಲುವ ಮೂಲಕವಾಗಿ ಕೃಷಿಯ ಬೆಳವಣಿಗೆಯು ಪ್ರಾರಂಭವಾಯಿತು. ಜನರು ಅಂದಿನಿಂದ ಭೂಮಿಯನ್ನು ಸಂಪತ್ತು ಎಂದು ಪೂಜಿಸಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ. ಸಮಾಜದ ಎಲ್ಲ ವರ್ಗದ ಜನ ಕೃಷಿಗೆ ಹೆಚ್ಚು ಮಹತ್ವವನ್ನು ನೀಡಿದ್ದಾರೆ. ಹೀಗಾಗಿ ಕೃಷಿಯೇ ಆ ಪ್ರದೇಶದ ಪ್ರಧಾನ ವೃತ್ತಿ ಹಾಗೂ ಜೀವನೋಪಾಯದ ಮಾರ್ಗವಾಗಿತ್ತು ರಾಜ್ಯದ ಒಟ್ಟು ಆರ್ಥಿಕತೆ ಕೃಷಿಯನ್ನು ಅವಲಂಬಿಸಿರುತ್ತದೆ.

ಸಾಮಾನ್ಯವಾಗಿ ಒಂದು ಪ್ರದೇಶದ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಲು ಆ ಪ್ರದೇಶದ ನೈಸರ್ಗಿಕ ಸಂಪತ್ತು ಮತ್ತು ಜನರ ಉದ್ಯೋಗಗಳನ್ನು ಅನುಸರಿಸಿದೆ. ಕೃಷಿಯೇ ಅಂದಿನ ಪ್ರಮುಖ ಆರ್ಥಿಕ ಸದೃಢತೆಯ ಸಂಕೇತವಾಗಿದೆ. ದಾವಣಗೆರೆ ಕಸಬಾ ಪರಿಸದ ಶಾಸನಗಳೆಲ್ಲವೂ ದಾನಕ್ಕೆ ಸಂಬಂಧಿಸಿದವುಗಳಾಗಿವೆ. ಆ ಶಾಸನಗಳಲ್ಲಿ ಭೂಮಿಯನ್ನು ದಾನ ಕೊಟ್ಟ ಬಗ್ಗೆ ಹೆಚ್ಚಿನ ಉಲ್ಲೇಖಗಳು ಕಂಡು ಬರುತ್ತದೆ. ಇಲ್ಲಿನ ಶಾಸನಗಳಲ್ಲಿ ಕಂಡು ಬರುವ ಭೂದಾನಗಳ ವರ್ಣನೆಯು ಕೃಷಿಯ ಮಹತ್ವನ್ನು ತಿಳಿಸುತ್ತವೆ. ಉದಾಹರಣೆಗೆ ಬೆದ್ದಲು, ಗದ್ದೆ, ಮುತ್ತರು, ಕೆರೆಯ ಕೆಳಗಣ ಭೂಮಿ, ತೋಟ, ಹೊದೋಟ, ಅಡಕೆತೋಟ, ಎಲೆಬಳಿ, ಹೀಗೆ ಅಂದು ಕೃಷಿ ಚಟುವಟಿಕೆಯಲ್ಲಿದಂತಹ ಎಲ್ಲ ವೈವಿಧ್ಯಮಯ ಕೃಷಿ ಭೂಮಿಯನ್ನು ವಿವರಿಸುತ್ತದೆ. ಕೆರೆ,

ಕಾಲುವೆ, ಬಾವಿ, ಹಳ್ಳ ಮುಂತಾದ ನೀರಿನ ಮೂಲಗಳ ಆಶ್ರಯದಿಂದ ವ್ಯವಸಾಯಕ್ಕೆ ಒಳಪಡಿಸಿದ ಭೂಮಿಯನ್ನು ಗದ್ದೆ, ಕರಿಭೂಮಿ, ನೀರಾವರಿ ಎಂದು ಕರೆಯುತ್ತಿದ್ದರು. ಇಲ್ಲಿನ ದೇವಾಲಯದ ಶಾಸನವೊಂದು ಕೃಷಿಯ ಬಗ್ಗೆ ಉಲ್ಲೇಖಿಸುತ್ತದೆ. ಈ ಪರಿಸರದಲ್ಲಿ ಪ್ರಮುಖವಾದ ಬೆಳೆ ಮೊದಲು ಹತ್ತಿಯಾಗಿತ್ತು. ಆದರೆ ಹೀಗ ತುಂಗಭದ್ರ ನೀರಾವರಿ ಸೌಲಭ್ಯದಿಂದ ಭತ್ತ, ಅಡಿಕೆ, ತೆಂಗು, ಬಾಳೆ, ಜೋಳ, ದ್ವಿದಳ, ಧಾನ್ಯ, ತರಕಾರಿ, ಹಣ್ಣು, ಹೂ, ಎಣ್ಣೆ ಬೀಜಗಳು ಇಂದು ಬೆಳೆಯುತ್ತಿದ್ದಾರೆ.

**ಕೈಗಾರಿಕೆಗಳು :** ಕೈಗಾರಿಕಾ ಅಭಿವೃದ್ಧಿಗೆ ಬೇಕಾಗುವ ಮೂಲ ಸವಲತ್ತುಗಳು ಭೂಮಿ, ಕಾರ್ಮಿಕ ವರ್ಗ, ಬಂಡವಾಳ ಹಾಗೂ ನಿರ್ವಹಣಾ ನಿಪುಣತೆ ಈ ಪರಿಸರದಲ್ಲಿ ಮೊದಲಿನಿಂದಲೂ ಕಂಡುಬರುತ್ತದೆ. ಈ ನಗರವು ಹಿಂದೆ ರಾಜ್ಯದ ಕೇದ್ರ ಭಾಗವಾಗಿ ಕೈಗಾರಿಕಾ ಅಭಿವೃದ್ಧಿಗೆ ಬೇಕಾಗುವ ಸೌಲಭ್ಯಗಳನ್ನು ಹೊಂದಿ ಒಂದು ಉತ್ತಮ ಕೈಗಾರಿಕಾ ಪ್ರದೇಶವಾಗಿ ಬೆಳೆಯಬಹುದಾದ ಎಲ್ಲಾ ಲಕ್ಷಣಗಳನ್ನು ಒಳಗೊಂಡಿತ್ತು. ಇಂದು ರಾಷ್ಟ್ರೀಯ ಹೆದ್ದಾರಿ, ರೈಲಿನ ಸವಲತ್ತು ಹೊಂದಿದ್ದು ಹಿಂದಿನಿಂದಲೂ ವಾಣಿಜ್ಯ ನಗರಿಯಾಗಿ ಅಭಿವೃದ್ಧಿಯನ್ನು ಹೊದುತ್ತಿರುವ ಪ್ರದೇಶವಾಗಿದೆ.

ಈ ಭಾಗದ ಮುಖ್ಯ ಬೆಳೆಗಳು ಭತ್ತ, ರಾಗಿ, ಜೋಳ, ಮುಸುಕಿನ ಜೋಳ, ಕಬ್ಬು, ಶೇಂಗಾ, ಹತ್ತಿ, ಅಡಿಕೆ ಮುಂತಾದವುಗಳು, ನಗರದಲ್ಲಿ ಸುಮಾರು ೩೯ ವಾಣಿಜ್ಯ ಬ್ಯಾಂಕುಗಳು ೧೦ ಗ್ರಾಮೀಣ ಬ್ಯಾಂಕ್‌ಗಳು, ೯ ನಗರ ಪ್ರದೇಶ ಸಹಕಾರಿ ಬ್ಯಾಂಕ್‌ಗಳು ಕಾರ್ಯನಿರ್ವಹಿಸುತ್ತಿದ್ದವು. ಕೈಗಾರಿಕಾ ಪ್ರದೇಶವಾಗಿ ೨೦ನೇ ಶತಮಾನದ ಪ್ರಮುಖವಾಗಿ ಹತ್ತಿಗಿರಣಿಗಳು, ಸಕ್ಕರೆ ಕಾರ್ಖಾನೆಗಳು, ಸಾವಿರಾರು ಸಣ್ಣ ಕೈಗಾರಿಕೆಗಳು, ಕಾರ್ಯ ಮಾಡುತ್ತಿದವು. ದಾವಣಗೆರೆ ನಗರವು ಒಂದು ಕಾಲದಲ್ಲಿ ಕರ್ನಾಟಕದ 'ಮ್ಯಾಂಚಸ್ಟರ್' ಎಂದು ಕರಿಸಿಕೊಳ್ಳುತ್ತಿತ್ತು. ಕಾರ್ಖಾನೆಗಳಿಗೆ ಪೂರಕವಾಗಿ ಕಾಟನ್ ಜಿನ್ನಿಂಗ್ ಮಿಲ್ಲುಗಳು ಸಾಕಷ್ಟು ಪ್ರಮಾಣದಲ್ಲಿ ಹಿಂದೆ ಬೆಳೆದಿದ್ದವು. ನಗರದ ೨೦ ರಷ್ಟು ಉದ್ಯೋಗವನ್ನು ಈ ಮಿಲ್ಲುಗಳಿಂದ ನಡೆಯುತ್ತಿದಿದ್ದು ಮುಖ್ಯ ಅಂಶವಾಗಿದೆ. ಒಂದು ಹಂತದಲ್ಲಿ ದಾವಣಗೆರೆಯ ಅರ್ಥ ವ್ಯವಸ್ಥೆಯೇ ಈ ಹತ್ತಿ ಗಿರಣಿಗಳ ಮೇಲೆ ಅವಲಂಬಿಸಿತ್ತೆಂದರೆ ತಪ್ಪಾಗಲಾರದು. ಈ ನಗರದ ಹತ್ತಿ ಗಿರಣಿಗಳಿಂದ ಹತ್ತಿ ಭಟ್ಟೆಯು ವಿವಿಧ ದೇಶಗಳಿಗೆ ರಫ್ತು ಆಗುತ್ತಿದ್ದ ಮುಖ್ಯವಾದ ಅಂಶವಾಗಿದೆ.

ನಂತರ ದಿನಗಳಲ್ಲಿ ದಾವಣಗೆರೆಯ ಮತ್ತೊಂದು ಪ್ರಮುಖ ಉದ್ಯಮ ಎಣ್ಣೆ ಗಿರಣಿಗಳು, ದಾವಣಗೆರೆಯ ಸುತ್ತ ಮುತ್ತ ಪ್ರದೇಶಗಳಲ್ಲಿ ಹತ್ತಿ, ಸೂರ್ಯಕಾಂತಿ, ಹಾಗೂ ಇತರೆ ಎಣ್ಣೆ ಕಾಳುಗಳನ್ನು ಬೆಳೆಯಬಾಗುತ್ತಿತ್ತು. ಈ ಕಾರಣದಿಂದಾಗಿ ದಾವಣಗೆರೆ ಈ ಹಿಂದೆ ಎಣ್ಣೆ ಉದ್ಯಮಕ್ಕೆ ಪ್ರಸಿದ್ಧಿಯಾದ ನಗರವಾಗಿತ್ತು. ಇಲ್ಲಿ ತಯಾರಿಸಿದ ಎಣ್ಣೆಯನ್ನು ಬೇರೆ ಊರುಗಳಿಗೆ

ಸರಬರಾಜು ಮಾಡಲಾಗುತ್ತಿತ್ತು. ಈ ಪರಿಸರದಲ್ಲಿ ಎರಡು ದೊಡ್ಡ ಪ್ರಮಾಣದ ಪ್ರಮುಖ ಕಾರ್ಖಾನೆಗಳಿದ್ದವು. ಮುಂದೆ ವಸ್ಪತಿ ಹಾಗೂ ಕಡಲೆಕಾಯಿ ಎಣ್ಣೆ ತಯಾರಿಸುವ ಘಟಕಗಳು ಪ್ರಾರಂಭವಾದವು ಇದಕ್ಕೆ ಪೂರಕವಾಗಿ ಸಾಬೂನು ತಯಾರಿಕಾ ಘಟಕಗಳು ಸ್ಥಾಪನೆಯಾದವು ನಂತರ, ಈ ಪರಿಸರದಲ್ಲಿ ಹಲವಾರು ಸಣ್ಣ ಕೈಗಾರಿಕೆಗಳು ಪ್ರಾರಂಭವಾದವು.

**ವ್ಯಾಪಾರ ಮತ್ತು ವಾಣಿಜ್ಯ :** ದಾವಣಗೆರೆ ಪರಿಸರವು ಕ್ರಿ.ಶ. ೧೧೨೩ ರತಲ್ಲಿ ಉಚ್ಚಂಗಿದುರ್ಗದ ತ್ರಿಭುವನ ಮಲ್ಲ ಕಟ್ಟಿಸಿದ್ದನೆಂದು ಹೇಳಲಾಗುವ ತ್ರಿಭುವನೇಶ್ವರ ದೇವಾಲಯ, ಈಗಿನ ದುರ್ಗಾಬಿಕ ದೇವಾಲಯದ ಒಂದು ಶಾಸನದಿಂದ ತಿಳಿಯಲಾಗಿದೆ. ಅದರ ಪಕ್ಕದಲ್ಲಿ ಒಂದು ದೊಡ್ಡ ಕೆರೆಯಿತ್ತಂತೆ. ಆಗ ದೊಡ್ಡ ವ್ಯಾಪಾರಿಗಳು, ವರ್ತಕರು ವ್ಯಾಪಾರಕ್ಕಾಗಿ ಹೋಗುವಂತ ಸಂದರ್ಭದಲ್ಲಿ ಈ ಪರಿಸರದ ಸುತ್ತ ವಿಶ್ರಾಂತಿಯನ್ನು ಪಡೆದು ಮುಂದೆ ಸಾಗುತ್ತಿರದಂತೆ ಹೀಗಾಗಿ ದಾವಣಗೆರೆ ಕಸಬಾ ಪರಿಸರವು ಕಾಲಮಾನದ ಮುಂಚಿನಿಂದಲೂ ವ್ಯಾಪಾರ ವಾಹಿವಾಟು ನಡೆಸಿರಬಹುದು. ಒಂದು ಪ್ರದೇಶದ ಆರ್ಥಿಕ ಅಭಿವೃದ್ಧಿಗೆ ಫಲವತ್ತಾದ ಭೂಮಿ ಹಾಗೂ ಅದರ ಉತ್ಪನ್ನಗಳು ಕಾರಣವಾಗುತ್ತವೆ. ಈ ಹಿನ್ನೆಲೆಯಲ್ಲಿ ಕೃಷಿ, ಕೈಗಾರಿಕೆಗಳು ಅನೇಕ ವಸ್ತುಗಳು ಉತ್ಪಾದನೆಗೊಳ್ಳುತ್ತಿದ್ದವು. ಉತ್ಪಾದನೆಯಾದ ಉತ್ಪನ್ನಗಳು ಅಥವಾ ವಸ್ತುಗಳು ಅಗತ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿರುತ್ತಿದ್ದರಿಂದ ಸಹಜವಾಗಿ ಬೇರೆ ಬೇರೆ ಪ್ರದೇಶಗಳಿಗೆ ಸರಬರಾಜು ಆಗುತ್ತಿದ್ದವು. ಇದು ಪ್ರತಿ ವ್ಯಾಪಾರ ಕೇಂದ್ರಕ್ಕೂ ಅನ್ವಯಿಸುತ್ತದೆ. ಪ್ರಸ್ತುತ ಈ ಪ್ರದೇಶದಲ್ಲಿ ಮೊದಲು ಹತ್ತಿ, ಜೋಳ, ಎಲೆ, ಅಡಿಕೆ, ಬಾಳೆ, ಸರಬರಾಜುಗುತ್ತಿದ್ದಂತೆ ತೋರುತ್ತದೆ. ವ್ಯಾಪಾರದ ಸರಕು ಸಾಗಾಣಿಕೆಗಾಗಿ ಹಿಂದೆ ಬಂಡಿಗಳನ್ನು ಬಲಸಲಾಗುತ್ತಿತ್ತು. ಹಿಂದೆ ಅಪ್ಪೋಜಿರಾಯನಿಗೆ ದಾವಣಗೆರೆಯನ್ನು ಜಹಗೀರನ್ನಾಗಿ ಹೈದರ್ ನೀಡಿದ ಆಗ ದಾವಣಗೆರೆ ಒಂದು ಹಳ್ಳಿಯಾಗಿತ್ತು. ಆದರೆ ಅಪ್ಪೋಜಿರಾಯನು ತನಗೆ ಜಹಗೀರಯನ್ನಾಗಿ ನೀಡಿದ ದಾವಣಗೆರೆಯನ್ನು ಅಭಿವೃದ್ಧಿ ಪಡಿಸಿದನು.[೨೫] ದೂರದ ಪ್ರದೇಶಗಳಿಂದ ಮರಾಠಿ ವ್ಯಾಪಾರಿಗಳನ್ನು ಕರೆತಂದು ದಾವಣಗೆರೆಯೊಂದು ವ್ಯಾಪಾರ ಸ್ಥಳವಾಗಲು ಬುನಾದಿ ಹಾಕಿದನು. ನಂತರ ದಿನಗಳಲ್ಲಿ ರಾಜನಹಳ್ಳಿ ಹನುಮಂತಪ್ಪ ದಾವಣಗೆರೆಯನ್ನು ಕಾಟನ್ ಸಿಟಿ ಮಾಡಿದ್ದು ಚರಿತ್ರೆಯಾಗಿದೆ. ತುಂಗಾಭದ್ರ ನೀರು ದೊರೆಯುವ ಮೊದಲು ಹತ್ತಿ, ಎಣ್ಣೆ ಕಾಳುಗಳು, ಮಿಲ್‌ಗಳು ಪ್ರಾರಂಭವಾಗಿದವು ಮುಂದೆ ದಾವಣಗೆರೆ ಪರಿಸರದಲ್ಲಿ ವ್ಯಾಪಾರ ಮತ್ತು ವರ್ತಕರ ನಗರವಾಗಿ ಬೆಳೆದಿರಬಹುದಾಗಿದೆ. ಪ್ರಾಚೀನ ಕಾಲದಲ್ಲಿ ದೇವಿಸೆಟ್ಟಿ ಎಂಬ ವರ್ತಕನು ದಾವಣಗೆರೆಯ ತ್ರಿಭುವನೇಶ್ವರ ದೇವಾಲಯಕ್ಕೆ ದಾನ ನೀಡಿದ ಸ್ಥಳವೇ ಇಂದು ದಾವಣಗೆರೆ ಮಹಾನಗರವಾಗಿ ಬೆಳೆಯಲು ಸಾಧ್ಯವಾಗಿದೆ.

**ತೂಕಗಳು ಮತ್ತು ಅಳತೆಗಳು** : ಒಂದು ವಸ್ತು ಅಥವಾ ಪ್ರದೇಶದ ನಿರ್ದಿಷ್ಟ ಪ್ರಮಾಣವನ್ನು ತಿಳಿಯಲು ತೂಕ ಮತ್ತು ಅಳತೆಗಳು ಅವಶ್ಯಕವಾಗಿದೆ, ಪ್ರಾಚೀನ ಕಾಲದ ರಾಜರು, ವ್ಯಾಪಾರಿಗಳು ಮತ್ತು ಊರಿನ ಶ್ರೀಮಂತ ಜನರು ದಾನವನ್ನು ನೀಡುವಾಗ ಇಂತಿಷ್ಟು ಎಂದು ಹೇಳಿ ಕೊಟ್ಟಿರುವುದು ಕಂಡು ಬಂದಿದೆ. ದಾವಣಗೆರೆ ಕಸಬಾ ಪರಿಸರವು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದರಿಂದ ದಾವಣಗೆರೆ ಜಿಲ್ಲೆಯಲ್ಲಿ ೮೦ಕ್ಕೂ ಹೆಚ್ಚು ಅಗ್ರಹಾರಗಳು ಹಾಗೂ ದಾವಣಗೆರೆ ತಾಲ್ಲೂಕಿನಲ್ಲಿ ೨೦ಕ್ಕೂ ಹೆಚ್ಚು ಅಗ್ರಹಾರಗಳು ಕಂಡು ಬರುತ್ತದೆ. ಆನೆಕೊಂಡ, ಎಲೇಬೇತೂರು, ಹಳೇ ಬೂದಿಹಾಳ್ ಕುಂದುವಾಡ ಚಿಕ್ಕ, ಗ್ರಾಮಗಳು, ಅಗ್ರಹಾರಗಳಾಗಿದ್ದವು.[೩೪] ದೇವಾಲಯಗಳಿಗೆ ದಾನಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ನೀಡಿರುವುದನ್ನು ಗಮನಿಸಬಹುದಾಗಿದೆ. ಈ ಪರಿಸರದ ಶಾಸನಗಳಲ್ಲಿ ಅಳತೆ ಮತ್ತು ತೂಕಗಳ ಉಲ್ಲೇಖ ಕಾಣಬಹುದು. ಬಹುತೇಕವಾಗಿ ಈ ಪರಿಸರದಲ್ಲಿ ಅಳತೆಗೋಲು ಪ್ರಮಾಣಗಳಾದ ಹೊಲ ಮತ್ತು ಭೂಮಿಗಳನ್ನು ಅಳೆಯುತ್ತಿದ್ದರು.

**ನಾಣ್ಯಗಳು** : ಮಾನವನ ನಿರಂತರ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ನಾಣ್ಯಗಳ ವ್ಯವಸ್ಥೆಯು ಮಹತ್ವವನ್ನು ಪಡೆದುಕೊಂಡಿದೆ. ತನ್ನ ಜೀವನಕ್ಕೆ ಬೇಕಾಗುವ ವಸ್ತುಗಳನ್ನು ಪಡೆದುಕೊಳ್ಳಲು ನಾಣ್ಯಗಳು ಅನುಕೂಲವಾಗಿದ್ದವು. ಪ್ರಾರಂಭದ ದಿನಗಳಲ್ಲಿ ವಸ್ತು ವಿನಿಮಯ ವಿಧಾನದಿಂದ ನಡೆದು ಬಂದಿದೆ. ತಮ್ಮಲ್ಲಿ ಇರುವ ವಸ್ತುಗಳನ್ನು ಬೇರೆ ವ್ಯಕ್ತಿಗಳಿಗೆ ಅವರಲ್ಲಿ ಇಂದತಹ ವಸ್ತುಗಳನ್ನು ಪ್ರತಿರೂಪವಾಗಿ ಕೊಡಲಾಗುತ್ತಿತ್ತು. ಪ್ರಾರಂಭದಲ್ಲಿ ಗೋವುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ನಂತರ ದಿನಗಳಲ್ಲಿ ಬಂಗಾರದ ವಸ್ತುಗಳನ್ನು ವಿನಿಮಯದ ವಸ್ತುಗಳು ಆರಂಭವಾಗಿ ಕ್ರಮೇಣ ನಾಣ್ಯಗಳು ಪ್ರಾರಂಭವಾದವು ಅದರಲ್ಲೂ ಬೇರೆ ಬೇರೆ ಭಾಗವಾಗಿ ವಿಂಗಡಿಸಿ ಕೊಂಡಿದ್ದರು. ಈ ನಾಣ್ಯಗಳ ಆರಂಭದಿಂದ ಆರ್ಥಿಕ ಕ್ಷೇತ್ರದಲ್ಲಿ ಹೊಸ ವಿಧಾನವೇ ಪ್ರಾರಂಭವಾಯಿತ್ತು. ನಾಣ್ಯಗಳನ್ನು ತಯಾರಿಸುವ ಸ್ಥಳಗಳನ್ನು ಕಮ್ಮಟಗಳೆಂದೂ ಅಚ್ಚಿನ ಸ್ಥಳಕೇ ಟಂಕ ಶಾಲೆಗಳೆಂದು ಕರೆಯಲಾಗಿದೆ.[೩೫] ರಾಜರ ಅನುಮತಿಯನ್ನು ಪಡೆದು ಕೆಲವೊಮ್ಮೆ ದೇವಾಲಯಗಳಲ್ಲಿ ಅಥವಾ ವ್ಯಕ್ತಿಗಳು ನಾಣ್ಯಗಳನ್ನು ಅಚ್ಚು ಹಾಕುತ್ತಿದ್ದರು. ಅದರೆ ಅವರು ಬದಲಾಗಿ ರಾಜರಿಗೆ ತೆರಿಗೆಯನ್ನು ನೀಡಬೇಕಾಗಿತ್ತು. ದಾವಣಗೆರೆ ಕಸಬಾ ಪರಿಸರದಲ್ಲಿ ಬಾದಾಮಿ ಚಾಲುಕ್ಯರ ಕಾಲದ ಮತ್ತು ಕಲ್ಯಾಣಿ ಚಾಲುಕ್ಯರ ಕಾಲದ ಬಂಗಾರದ ನಾಣ್ಯಗಳು ಕೆಲವೊಮ್ಮೆ ದೊರೆತಿವೆ, ಅದರಿಂದ ಇವರು ಇಡೀ ದಕ್ಷಿಣ ಭಾರತದಲ್ಲಿವೇ ಪ್ರಮುಖರಾಗಿದ್ದಾರೆ, ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳನ್ನು ರಾಜಾದಿತ್ಯನ ವ್ಯವಹಾರ ಗಣಿತದಲ್ಲಿ ಹೇಳಿದ್ದಾರೆ.

**ಅಡಿ ಟಿಪ್ಪಣಿಗಳು**

೦೧. ಶ್ರೀನಿವಾಸ ಪಾಡಿಗಾರ, ಭಾರತದ ಇತಿಹಾಸದ ಶಾಸನ ಆಕರಗಳು, ಪುಟ.೧

೦೨. ಕೃಷ್ಣಮೂರ್ತಿ ಸಿ.ಪಿ., ಶಾಸನಶಾಸ್ತ್ರ, ಪುಟ.೨೮–೨೯

೦೩. ಚಿದಾನಂದಮೂರ್ತಿ ಎಂ., ೧೯೬೬, ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೧೩–೧೭

೦೪. ಭಗವತಿ ಎಸ್.ಎನ್., ಮೇಲಿನಮನಿ ಎಚ್.ಎಸ್., ಕನ್ನಡ ಶಾಸನಗಳ ಅಧ್ಯಯನ, ಪುಟ.೧–೯

೦೫. ಕಲಬುರ್ಗಿ ಎಂ.ಎಂ., ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು, ಪುಟ.೩–೪

೦೬. ಗಿರಿಜ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ.೩೫೪

೦೭. ಅದೇ, ಪುಟ.೩೫೬

೦೮. ಅದೇ, ಪುಟ.೩೭೮

೦೯. ಸಂಕ್ಷಿಪ್ತ ಕನ್ನಡ ನಿಘಟ್ಟ (ಪರಿಷ್ಕೃತ), ೨೦೦೧, ಪುಟ.೧೧೭

೧೦. ಜಯಣ್ಣ ಯು., ೨೦೦೨, ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಅಧ್ಯಯನ, ಪುಟ.೨೦೬.

೧೧. ಬರುಡೇಕಟ್ಟೆ ಮಂಜಪ್ಪ, ೨೦೧೩, ಬಾತಿಯಬೆಳಗು, ಪುಟ.೨೧–೨೨

೧೨. ಬರುಡೇಕಟ್ಟೆ ಮಂಜಪ್ಪ, ಅದೇ ಪುಟ.೨೩

೧೩. ಅದೇ, ಪುಟ.೨೩

೧೪. ಅದೇ, ಪುಟ.೨೪

೧೫. ಅದೇ, ಪುಟ.೨೪

೧೬. ಗೋಪಾಲರಾವ್ ಎಚ್.ಎಸ್., ೧೯೯೩, ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಕಾಶಕರು – ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ಪುಟ.೧೮೨ ಕೊನೆಗೆ ಪ್ರಾಚೀನ ಶೈವಧರ್ಮದ ಶಾಖೆಗಳನ್ನು ಗುರುತಿಸುವಾಗ ಅಷ್ಟಾಗಿ ಏಕ ರೂಪತೆ ಕಂಡು ಬರುವುದಿಲ್ಲ. ಅದಕ್ಕೆ ಕಾರಣ ಕೆಲವು ಶೈವಶಾಖೆಗಳಲ್ಲಿ ಅರ್ಚರಣೆಯ ಸಮ್ಯಾಂಶಗಳು ಮೇಲುನೋಟಕ್ಕೆ ಒಂದೇ ಆಗಿ ಕಂಡಿರಬಹುದು ಮತ್ತು ಭಿನ್ನಧಾರ್ಮಿಕಯರಿಗೆ ಒಂದೊಂದು ಶಾಖೆಯ ಸೂಕ್ಷ್ಮ ಪ್ರಭೇದಗಳನ್ನು ಗುರುತಿಸಲು ಸಾಧ್ಯವಾಗಲೇ ಇರಬಹುದು.

೧೭. ಮಂಜುನಾಥ್ ಸಿ.ಯು., ೨೦೧೨, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ ಚಿತ್ಕಲಾ ಪ್ರಕಾಶನ. ಬೆಂಗಳೂರು ಪುಟ.೬

೧೮. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪುಟ.೨೪೬

೧೯. ಅದೇ, ಪುಟ.೨೪೭

೨೦. ಅದೇ, ಪುಟ.೧೧೩

೨೧. ಗುರುರಾಜಭಟ್ ಪಿ., ೧೯೭೫, ಸ್ಟಡೀಸ್ ಆಫ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಪು.ಸಂ. ೨೮೯

೨೨. ಬುರುಡೆಕಟ್ಟೆ ಮಂಜಪ್ಪ, ಪೂರ್ವೋಕ್ತ, ಪುಟ ೨೭-೨೮

೨೩. ಅಚಾರಿ ಮಂಜುಳಾ, ಕಾಳಾಮುಖ ಪರಂಪರೆ ಮತ್ತು ಮುರಜಾಪೀಠ ಸಾಂಸ್ಕೃತಿಕ ಅಧ್ಯಯನ, ಪು.ಸಂ. ೩೨-೩೩

೨೪. ಅದೇ, ಪುಟ.೨೯೫-೨೯೬

೨೫. ಬುರುಡೆಕಟ್ಟೆ ಮಂಜಪ್ಪ, ಪೂರ್ವೋಕ್ತ, ಪುಟ.೪೯-೫೦

೨೬. ಅಂಬಳಿಕ ಹಿರಿಯಣ್ಣ, ಕನ್ನಡ ವಿಷಯ ವಿಶ್ವಕೋಶ, ಪುಟ.೪೪೬

೨೭. ವಾಸುದೇವ ಬಡಿಗೇರ, ಪೂರ್ವೋಕ್ತ, ಪುಟ.೨೬೨

೨೮. ದಯಾನಂದ ಕೆ.ಎ.,ಕರ್ನಾಟಕದ ಪರಂಪರೆ ಸಂಪುಟ-೧, ಪುಟ.೧೯೭

೨೯. ಬುರುಡೆಕಟ್ಟೆ ಮಂಜಪ್ಪ, ಪೂರ್ವೋಕ್ತ, ಪುಟ.೪೮

೩೦. ಈಶ್ವರಪ್ಪ ಎಂ.ಜಿ., ೧೯೯೨, ದವನಸಿರಿ, ಪುಟ.೬೦

೩೧. ಗೋಪಾಲರಾವ್ ಎಚ್.ಎಸ್., ಕಲ್ಯಾಣ ಚಾಲುಕ್ಯರ ದೇವಾಲಯಗಳು, ಪುಟ.೧೮೯

೩೨. ಗಿರಿಜಾ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ, ಪುಟ.೩೮೧

೩೩. ಬುರುಡೆಕಟ್ಟೆ ಮಂಜಪ್ಪ, ಪೂರ್ವೋಕ್ತ, ಪುಟ.೨೨

೩೪. ಅದೇ, ಪುಟ.೨೦

೩೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪುಟ.೨೬೧-೨೬೨

# ನಂಬಿಕೆ ಮತ್ತು ಆಚರಣೆಗಳು

## ನಂಬಿಕೆ ಮತ್ತು ಆಚರಣೆಗಳು

ಮಾನವರ ಜೀವನದಲ್ಲಿ ನಂಬಿಕೆ ಮತ್ತು ಅಚರಣೆಗಳು ಒಂದು ಭಾಗವಾಗಿ ರೂಢಿಗತವಾಗಿ ಮುಂದುವರೆದುಕೊಂಡು ಬಂದಿರುತ್ತದೆ. ಆಚರಣೆಗಳು ಎಂದರೆ ಪ್ರತಿಯೊಂದು ಸಮುದಾಯವು ಪರಂಪರಾಗತವಾಗಿ ರೂಢಿಸಿ ಕೊಂಡು ಬಂದಿರುವ ಸಂಪ್ರದಾಯವಾಗಿದೆ. ಮಾನವರು ಒಂದು ನಿರ್ದಿಷ್ಟ ಸ್ಥಳದಲ್ಲಿ ಮತ್ತು ಕಾಲದಲ್ಲಿ ನಡೆಸುವ ಆಚರಣೆಯಾಗಿದೆ. ಮಾನವ ಉಗಮದೊಂದಿಗೆ ಆರಂಭಗೊಂಡಿರುವ ಆಚರಣೆಗಳು, ಆತನ ಬದುಕಿನಲ್ಲಿ ಇಂದಿಗೂ ಪ್ರಮುಖ ಪಾತ್ರ ನಿರ್ವಹಿಸುತ್ತಿವೆ. ನಂಬಿಕೆಯ ಭೌತಿಕ ರೂಪ ಆಚರಣೆ ನಂಬಿಕೆಗಳನ್ನು ಅಂಗೀಕರಿಸಿದಾಗ ಅವು ಆಚರಣೆಯನ್ನು ದೃಢೀಪಡಿಸಿ ಪುನಶ್ಚೇತನಗೊಳಿಸುತ್ತವೆ. ಮಾನವರು ಹುಟ್ಟಿನಿಂದ ಸಾಯುವವರೆಗೂ ತಮ್ಮ ಜೀವನದ ವಿವಿಧ ಹಂತಗಳಲ್ಲಿ ಹಾಗೂ ಕಾಲದ ಪರಿವರ್ತನೆಯನ್ನು ಅನುಸರಿಸಿ ವಿವಿಧ ರೀತಿಯ ಆಚರಣೆಗಳನ್ನು ನಡೆಸುತ್ತಾನೆ. ಪ್ರತಿಯೊಂದು ಕಾಲಘಟ್ಟದಲ್ಲಿಯೂ ಜನತೆಯ ನಂಬಿಕೆಗಳು ಮುಖ್ಯೋದ್ದೇಶವಾಗಿತ್ತೆಂಬುದನ್ನು ಮರೆಯಲಾಗದು. ಆಚರಣೆಗಳು ಧಾರ್ಮಿಕ ಸಂಬಂಧಿಯಾದ ಕ್ರಿಯಾ ರೂಪಗಳು ಮಾನವನ ಬದುಕನ್ನು ರೂಪಿಸುವಲ್ಲಿ ಸಂಸ್ಕೃತಿಯ ಪೋಷಣೆಯಲ್ಲಿ ನಾಗರೀಕತೆಯನ್ನು ಬೆಳೆಸುವಲ್ಲಿ ಸಂಪ್ರದಾಯ ಆಚರಣೆಗಳು ಮಹತ್ವವಾದ ಪಾತ್ರವಹಿಸುತ್ತದೆ.[೧]

## ಕೃಷಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳು

ಜನರ ನಂಬಿಕೆಯಲ್ಲಿ ಒಳ್ಳೆಯದು, ಕೆಟ್ಟದ್ದು ಎನ್ನುವ ಆಲೋಚನೆಗಳು ಚಾರಿತ್ರಿಕ ಪರಿಣಾಮ ನೀಡುತ್ತದೆ. ಬಾಳಿಗೊಂದು ನಂಬಿಕೆ ಬೇಕು, ಎನ್ನುವ ಅಂಶ ಯಾವಗಲೂ ಸ್ಪಷ್ಟವಾಗಿದೆ. ನಂಬಿಕೆ ಮಾನವ ಸಮಾಜದ ಮೂಲಪೇಕ್ಷೆಯಾದ 'ಮೂಲ್ಯ' ಮತ್ತು ತತ್ವ ಚಿಂತನೆಗೆ ತಳಹದಿಯಾಗಿದೆ. ಒಂದು ನಂಬಿಕೆ ಮೌಲ್ಯವಾಗುವ ಮೂಲಕ ಒಂದು ಜನಪದ ಸೃಷ್ಟಿಯಾಗುತ್ತದೆ. ಆ ಜನಪದಕ್ಕೊಂದು ಧರ್ಮ ಮತ್ತು ದೇವರುಗಳು ಬರುತ್ತವೆ. ಈ ನಂಬಿಕೆಯ ಮುಂದುವರಿಕೆಗಾಗಿ ಆಚರಣೆ ಅನುಷ್ಠಾನಗಳು ಉಂಟಾಗುತ್ತದೆ. ಹೀಗೆ ಮಾನವರ ಬದುಕಿನಲ್ಲಿ ಸ್ಥಾಪನೆ ನಂಬಿಕೆಯಲ್ಲಿ ಹೀಗೆ ಮಾನವ ಬದುಕಿನ ಸ್ಥಾಪನೆ ನಂಬಿಕೆಯಲ್ಲಿದೆ. ಹೀಗೆ ಸಮಾಜದಲ್ಲಿ ನಂಬಿಕೆಗಳು ವ್ಯವಸ್ಥೆಗೊಳಿಸಿಕೊಳ್ಳಲು ಕಾರಣವಾಗುತ್ತದೆ.

ರೈತರು ಒಕ್ಕಲುತನ, ಕೃಷಿ, ವ್ಯವಸಾಯ, ರೈತಾಪಿಕಸುಬು ಹೀಗೆ ಹಲವು ಹೆಸರುಗಳಿಂದ ಕರೆಯಲ್ಪಡುತ್ತಾದೆ. ರೈತರು ಕೃಷಿಯನ್ನು ಬದುಕಿನ ಜೀವವಾಗಿಸಿ ಕೊಂಡಿದ್ದಾರೆ. ಕೃಷಿಯು ಸಕಲ ಜೀವರಾಶಿಗೆ ಅನ್ನ ನೀಡುವ ಪವಿತ್ರ ಕಾರ್ಯವಾಗಿದೆ. ಭತ್ತ, ಅಡಿಕೆ, ಕಬ್ಬು, ಹತ್ತಿ, ಬಾಳೆ, ಮುಂತಾದವರನ್ನು ಬೆಳೆಯುವ ರೈತರು ಆ ಪರಿಸರದಲ್ಲಿ ದೊರೆಯುವ ನೀರಾವರಿ ಸೌಲಭ್ಯ ಮತ್ತು ಕೆರೆ ಬಾವಿಗಳ ಹಾಗೂ ಮಳೆಯನ್ನು ಕೃಷಿಗೆ ಅವಲಂಭಿಸಿರುತ್ತಾರೆ. ಹೀಗಾಗಿ ರೈತರು ಭೂಮಿ ತಾಯಿಯನ್ನು ನಂಬಿ ಬದುಕುವ ಅನುವಂಶೀಯತೆ ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತದೆ.[೨] ಪ್ರಸುತ್ತ ದಾವಣಗೆರೆ ಕಸಬಾ ಪರಿಸರದಲ್ಲಿ ಕೃಷಿಗೆ ಸಂಬಂಧಿಸಿದ ಹಲವಾರು ಆಚರಣೆಗಳು ತಿಳಿದು ಬರುತ್ತದೆ.

**ಹೊನ್ನಾರು** : ಕರ್ನಾಟಕದಲ್ಲಿ ರೈತರ ಮಹತ್ವದ ಆಚರಣೆ ಎಂದರೆ ಹೊನ್ನಾರು ಆಗಿದೆ. ಇದನ್ನು ಹೊನ್ನಾ ಆರು ಅರ್ಥಾತ್ ಬಂಗಾರದ ಆರಂಭವನ್ನು ಮುಂಗಾರು ಬೇಸಾಯದ ಸಂದರ್ಭದಲ್ಲಿ ಗ್ರಾಮದ ಜನರು ಆರಂಭಿಸುತ್ತಾರೆ. ಪ್ರತಿ ಸಂವತ್ಸರ ಆರಂಭ ಆಗುವಾಗಲೂ ಉಗಾದಿಯ ಪಾಂಡ್ಯದ ದಿವಸ 'ಹೊನ್ನಾರು' ಕಟ್ಟುತ್ತಾರೆ. ಕೆಲವಡೆ ಹೊನ್ನಾರನ್ನು 'ಹೊನ್ನೇರು' ಮೊದಲ ಬೇಸಾಯ 'ಮೊದಲು ಮಾಡುವುದು' 'ಹೊಸತು ಮಾಡುವುದು' ಎಂದು ವಿವಿಧ ಹೆಸರುಗಳಿಂದ ರೈತರು ಕರೆಯುತ್ತಾರೆ. ವ್ಯವಸಾಯದ ಕೆಲಸ ಕಾರ್ಯಗಳಿಗೆ ಆರಂಭ ಮತ್ತು ಅಂತ್ಯಗಳಿಲ್ಲವಾದರೂ ವರುಷದ ಆರಂಭದಲ್ಲಿ ಬೇಸಾಯ ಮೊದಲು ಮಾಡಿ ಆ ವರುಷದ ತನ್ನ ಕೆಲಸ ಕಾರ್ಯಗಳಿಗೆ ರೈತರು ನಾಂದಿ ಹಾಡಿಕೊಳ್ಳುತ್ತಾರೆ. ಸಾಧಾರಣವಾಗಿ ಉಗಾದಿಯ ಪಾಂಡ್ಯದ ದಿವಸ ಮೊದಲು ಮಾಡುತ್ತಾರೆ. ಅಥವಾ ನಂತರದ ಹತ್ತು ಹದಿನೈದು ದಿನಗಳಲ್ಲಿ ಒಂದು ಗೊತ್ತಾದ ದಿವಸ ಹೊನ್ನಾರು ಕಟ್ಟಬೇಕು.[೩] ಆ ಗ್ರಾಮದ ಜನರು ಸಾಮೂಹಿಕವಾಗಿ ಅಲ್ಲಿಯ ತನಕ ಆ ಊರಿನ ಯಾವ ರೈತನೂ ಬೆಸಾಯವನ್ನು ಮಾಡುವಂತಿಲ್ಲ. ಮಾಡುವುದು ನಿಷಿದ್ಧವಾಗಿರುತ್ತದೆ. ಯಾರಾದರು ಮಾಡಿದರೆ ಊರಿನ ಜನರು ಬಹಿಷ್ಕಾರಕ್ಕೆ ಗುರಿಯಾಗಬೇಕಾಗುತ್ತದೆ.

**ಬಿತ್ತನೆ ಪೂಜೆ** : ಭೂಮಿಯನ್ನು ಬಿತ್ತನೆ ಮೊದಲು ಅಥವಾ ಬೀಜವನ್ನು ಬಿತ್ತುವ ಮೊದಲು ಬಿದಿರಿನಿಂದ ತಯಾರಿಸಿದ ಗೋಡೆಗಳಲ್ಲಿ ಮಾಡಿ ಹೊಲದ ಮೂಲೆಯಲ್ಲಿಟ್ಟು ಪೂಜೆ ಮಾಡಿ, ಬಿತ್ತುವ ಬೀಜಗಳನ್ನು ತುಂಬಿ ವಿಭೂತಿ, ಅರಿಶಿನ, ಕುಂಕುಮ ಇಟ್ಟು ಸಗಣಿಯಲ್ಲಿ ಗಣೇಶನನ್ನು ಪೂಜಿಸುತ್ತಾ ಒಂದು ನೂರಾಗಲಿ, ನೂರು ಸಾವಿರವಾಗಲಿ, ಸಾವಿರ ಲಕ್ಷವಾಗಲಿ ಹೀಗೆ ಮುಂದುವರೆಯುಲ್ಲಿ ಎಂದು ನಂಬಿಕೆಯಿಂದ ದೇವರನ್ನು ಪೂಜೆಮಾಡಿ ಬಿತ್ತನೆ ಕಾರ್ಯವನ್ನು ದಾವಣಗೆರೆ ಕಸಬಾ ಪರಿಸರದಲ್ಲಿ ಶುರುಮಾಡುತ್ತಾರೆ.[೪]

**ಕಣ ಮಾಡುವುದು :** ರೈತರು ಸಮೃದ್ಧಿಯಾಗಿ ಬೆಳೆದಿರುವ ಆಹಾರ ದಾನ್ಯಗಳನ್ನು ಹುಲ್ಲಿನಿಂದ ಬೇರೆ ಮಾಡಿ ಕಾಳುಗಳನ್ನು ಪ್ರತೇಕಗೊಳಿಸುತ್ತಾರೆ. ಇದು ಅತ್ಯಾವಶ್ಯಕವಾಗಿದ್ದು ಕೊಯ್ಲು ಮಾಡಿರುವ ಗಟ್ಟಿಯಾಗಿರುವ ಒಂದು ನಿರ್ದಿಷ್ಟ ಸ್ಥಳದಲ್ಲಿ ಕಳೆಯನ್ನು ಕೆತ್ತಿ ವೃತ್ತಾಕಾರವಾಗಿ ಕಣವನ್ನು ಮಾಡುತ್ತಾರೆ. ನಂತರ ಈ ಕಣವನ್ನು ಗಟ್ಟಿಗೊಳಿಸಿ ಒಂದು ಕಡೆ ರಾಶಿ ಹಾಕಿ ಸಾರಿಸಿ ೨-೪ ದಿನಗಳ ನಂತರ ಒಣಗಿದ ಮೇಲೆ ಹುಲ್ಲಿನ ರಾಶಿಯನ್ನು ಅದರ ಮೇಲೆ ಹಾಸಿ ರೋಣಗಲ್ಲನ್ನು ಹೊಡೆಯುವ ಮುನ್ನ ಅದನ್ನು ಪೂಜೆ ಮಾಡುತ್ತಾರೆ.[೫] ಕೆಲವೊಮ್ಮೆ ಆಧುನಿಕತೆಯ ಸ್ಪರ್ಶದಿಂದ ಇಂದು ಆಧುನಿಕ ವಿಧಾನಗಳನ್ನು ದಾವಣಗೆರೆ ಕಸಬಾ ಪರಿಸರದಲ್ಲಿ ನೋಡಬಹುದಾಗಿದೆ. ಇಂದಿಗೂ ಹಲವು ಭಾಗಗಳಲ್ಲಿ ಹಳೆಯ ಪದ್ಧತಿಯಾದ ಕಣ ಮಾಡುವುದು ಇಂದಿಗೂ ಕಾಣಬಹುದಾಗಿದೆ.

**ರಾಶಿ ಪೂಜೆ :** ಹುಲ್ಲಿನಿಂದ ಬೇರ್ಪಟ್ಟ ಧ್ಯಾನಗಳಲ್ಲಿ ಜೋಳನ್ನು ತೆಗೆದು ಗಟ್ಟಿಯಾದ ಧಾನ್ಯಗಳನ್ನು ಒಂದು ಕಡೆ ರಾಶಿ ಹಾಕುತ್ತಾರೆ. ರಾಶಿಯ ಸುತ್ತಲೂ ಧಾನ್ಯ ಮಾಡಲು ಬಳಸಿದ್ದ ಕೋಲು, ಮರಗೋಲು, ಇಬ್ಬಳ, ಮರ ಮುಂತಾದವುಗಳನ್ನು ರಾಶಿಗೆ ಇಟ್ಟು ಮಾವಿನ ಎಲೆ, ಹೂವುಗಳನ್ನು ರಾಶಿಗೆ ಮತ್ತು ರೋಣ ಕಲ್ಲುಗೆ ಮುಡಿಸಿ ಪೂಜೆ ಮಾಡುತ್ತಾರೆ. ಪೂಜೆ ಸಂದರ್ಭದಲ್ಲಿ ಕಾಳುಗಳ ಪಲ್ಲಾರ ಅಥವಾ ಮಂಡಕ್ಕಿ ಮತ್ತು ಬೆಲ್ಲವನ್ನು ಒಟ್ಟಿಗೆ ಸೇರಿಸಿ ರಾಶಿಯ ಮುಂದೆ ಇಟ್ಟು ನೈವೇದ್ಯ ಮಾಡುತ್ತಾರೆ. ನಂತರ ಅದನ್ನು ಅಲ್ಲಿ ಇರುವ ಎಲ್ಲಾ ಜನರಿಗೆ ನೀಡಿ ಧಾನ್ಯವನ್ನು ಚೀಲಗಳಿಗೆ ತುಂಬುತ್ತಾರೆ. ಈ ರೀತಿ ದಾವಣಗೆರೆ ಕಸಬಾ ಪರಿಸರದಲ್ಲಿ ರೈತರು ಎಲ್ಲಾ ಗ್ರಾಮಗಳಲ್ಲಿ ಕೃಷಿಯ ಆಚರಣೆಗಳನ್ನು ಮಾಡುತ್ತಾರೆ.[೬] ಈ ಆಚರಣೆ ಮಾಡುವುದರ ಉದ್ದೇಶ ತಮ್ಮ ಜಮೀನುಗಳಲ್ಲಿ ಕೃಷಿ ಚಟುವಟಿಕೆಗಳು ಸುಗಮವಾಗಿ ನಡೆಯುತ್ತವೆ ಎಂದು ರೈತರು ನಂಬಿದ್ದಾರೆ.

**ಗ್ರಾಮಗಳಲ್ಲಿ ಆಚರಣೆಯಲ್ಲಿರುವ ನಂಬಿಕೆ-ಸಂಪ್ರದಾಯ**

**ದೇವರಹಳ್ಳಿ :** ದಾವಣಗೆರೆ ಕಾಡ್ಲೆಬಾಳು ಗ್ರಾಮಗಳ ಮಧ್ಯ ಈ ಗ್ರಾಮವಿದೆ. ಇಲ್ಲಿ ಮುಸಲ್ಮಾನ ಜನಾಂಗದವರು ಹೆಚ್ಚು ವಾಸವಾಗಿದ್ದಾರೆ. ಅದರೆ ಹಿಂದೂಗಳು ಬಸವಣ್ಣ ದೇವರು ಪೂಜೆ ಪ್ರಮುಖವಾಗಿದೆ. ಪ್ರತಿ ವರ್ಷ ದೊಡ್ಡ ಜಾತ್ರೆಯಾಗುತ್ತದೆ. ಈ ಜಾತ್ರೆಗೆ ಕಡ್ಲೆಬಾಳು, ಬೂದಾಳು, ಅರಸಪ್ಪನ ಹಟ, ಮಾಗಾನಹಳ್ಳಿ ದಾವಣಗೆರೆ. ಕಸಬಾ ಗ್ರಾಮಗಳ ಕಡೆಗಳಿಂದ ತುಂಬಾ ಜನರು ಬರುತ್ತಾರೆ. ಹಾಗೆಯೇ ರಾಣೆಬೆನ್ನೂರು ತಾಲೂಕಿನ ಆರೆ ಮಲ್ಲಾಪುರ ಗ್ರಾಮದವರು ಈ ಜಾತ್ರೆಗೆ ಬಂದು ಒಂದು ನೂರಾ ಒಂದು ತೆಂಗಿನಕಾಯಿ ಒಡಿಸಿ ಪೂಜೆಮಾಡಿದ ನಂತರವೇ ಬಸವಣ್ಣನ ತೇರು ಎಳೆಯುತ್ತಾನೆ.ಇಲ್ಲಿ ಯಾವ ಜಾತಿ ಭೇದವಿಲ್ಲದೆ ಹಿಂದು ಮುಸ್ಲಿಂರು ತಮ್ಮ ದನಕರುಗಳಿಗೆ

ಏನಾದರು ತೊಂದರೆ ಆದರೆ ಬಸವಣ್ಣ ದೇವರಿಗೆ ಹರಕ್ಕೆ ಹೊತ್ತುಕೊಳ್ಳುತ್ತಾರೆ. ಬಸವಣ್ಣನ ಉತ್ಸವದಲ್ಲಿ ಮುಸಲ್ಮಾನರು ಸಹ ಒಟ್ಟಿಗೆ ಸೇರಿ ಜಾತ್ರೆಗೆ ಭಾಗವಹಿಸುತ್ತಾರೆ.[೭]

**ನಾಗರಕಟ್ಟೆ** : ದಾವಣಗೆರೆ ಅಣಜಿ ಮಾರ್ಗದಲ್ಲಿ ಅಲೂರ ಹಟ್ಟಿ, ಎಲೇಬೇತೂರಿನ ಮಧ್ಯ ಈ ಗ್ರಾಮ ಕಂಡು ಬರುತ್ತದೆ. ಹಿಂದೆ ಇಲ್ಲಿ ನಾಗರ ಹಾವುಗಳ ಕಾಟ ಬಹಳವಾಗಿದ್ದು, ಅದಕ್ಕಾಗಿ ನಾಗರ ಕಲ್ಲುಗಳನ್ನು ಸ್ಥಾಪಿಸಿ, ಜನರು ಪೂಜೆ ಮಾಡತೊಡಗಿದ್ದರಿಂದ ಹಾವಿನಕಾಟ ಕಡಿಮೆಯಾಯಿತು ಎಂದು ಸ್ಥಳೀಯರು ಹೇಳುತ್ತಾರೆ. ಇಲ್ಲಿ ಒಂದು ಕೆರೆ ಇದೆ. ಆಗಾಗ ಸುತ್ತ-ಮುತ್ತಲಿನ ಗ್ರಾಮಸ್ಥರು ಬಂದು ಎಲ್ಲಾರಿಗೂ ಒಳಿತು ಅಗಲ್ಲಿ ಎಂದು ಶುಭ ಸಮಾರಂಭಗಳಲ್ಲಿ ಬಂದು ಗಂಗಾಪೂಜೆ ಮಾಡಿಕೊಂಡು ಹೋಗುತ್ತಾರಂತೆ.[೮]

**ನೀಲೇನಹಳ್ಳಿ** : ಈ ಗ್ರಾಮದಲ್ಲಿ ಆಂಜನೇಯಸ್ವಾಮಿ ದೇವಾಲಯವಿದೆ. ಇಲ್ಲಿ ಪ್ರತಿವರ್ಷ ಕಾರ್ತಿಕೋತ್ಸವ ಆಚರಿಸುತ್ತಾರೆ[೯]. ದಾವಣಗೆರೆಯ ಬಳಿಯ ಆನೆಕೊಂಡದ ಜಾತ್ರೆ ಸಮಯದಲ್ಲಿ ಈ ನೀಲೇನಹಳ್ಳಿ ಆಂಜನೇಯಸ್ವಾಮಿಯ ಆದೇಶದಂತೆಯೇ ಜಾತ್ರೆ ನಡೆಸಬೇಕು ಎಂಬ ನಂಬಿಕೆ ಜನರಲ್ಲಿ ಇಂದಿಗೂ ಕಂಡು ಬರುತ್ತದೆ.

**ಚಿಕ್ಕನಹಳ್ಳಿ** : ದಾವಣಗೆರೆಯ ಕಸಬಾ ಪರಿಸರದ ಚಿಕ್ಕನಹಳ್ಳಿ ಗ್ರಾಮದ ಅವರಗೆರೆ ಗಡಿಯಲ್ಲಿ ಗಾಣಗಿತ್ತಿ ಕಲ್ಲು ಎನ್ನುವ ಒಂದು ಮಾಸ್ತಿ ಕಲ್ಲಿನ ಸ್ಥಳವಿದೆ. ಈ ಸ್ಥಳಕ್ಕೆ ಒಂದು ದೊಡ್ಡ ಕತೆಯೇ ಇದೆ. ಊರಿಗೆ ಶಾಂತಿ ಬರಲೆಂದು ಒಮ್ಮೆ ಚರಗ ಚೆಲ್ಲುವಾಗ, ವ್ಯಕ್ತಿಯೊಂಬ್ಬ ಅಡ್ಡಬಂದನಂತೆ ಚರಗದ ಸಂಪ್ರದಾಯವೆಂದರೆ ದೇವರ ಹೆಸರಿನಲ್ಲಿ ಬಲಿ ಕೊಟ್ಟನಂತರ ಅದರ ಹುಲಸನ್ನು ಚರಗ ಊರ ಶಾಂತಿಗಾಗಿ ಎರಚುತ್ತಾ ಬರುತ್ತಾರೆ. ಹಾಗೆ ಬರುವಾಗ ಯಾರಾದರೂ ಅಡ್ಡಬಂದವರನ್ನು ಅಟ್ಟಿಸಿಕೊಂಡು ಬಂದಾಗ ಅವನು ಜೀವಭಯದಿಂದ ಈಗಿನ ಗಾಣೆಗಿತ್ತಿ ಕಲ್ಲಿನ ಬಳಿ ಒಂದು ದಟ್ಟವಾದ ಪಳೆಯಲ್ಲಿ ಅಡಗಿಕೊಡನಂತೆ. ಹುಡುಕಿಕೊಂಡು ಬಂದವರು ಆ ಪಳೆಯಬಳಿ ಅದೇ ಸಮಯದಲ್ಲಿದ್ದ ಗಾಣಿಗರ ಹೆಣ್ಣುಮಗಳನ್ನು ಓಡಿಬಂದವನ ಬಗ್ಗೆ ಕೇಳಲಾಗಿ, ಆಕೆ ಹಿಂದುಮುಂದುನೋಡದೆ ಆ ಪೊದೆಯಲ್ಲಿದ್ದಾನೆ ಎಂದು ಹೇಳಿ ಬಿಟ್ಟಳು ಚರುಗದವರು ಆ ಗಾಣೆಗಿತ್ತಿಯ ಹೇಳಿಕೆಯ ಪ್ರಕಾರ ಓಡಿ ಬಂದವನನ್ನು ಎಳೆದು ಕೊಂದು ಹಾಕಿದರು. ಆಗ ಆ ಗಾಣೆಗಿತ್ತಿಗೆ ತನ್ನ ತಪ್ಪಿನ ಅರಿವಾಗಿ ಪಾಪ ಒಬ್ಬ ಅಮಾಯಕನ ಸಾವಿಗೆ ಕಾರಣನಾದೆನೆಲ್ಲಾ ಎಂದು ನೊಂದುಕೊಂಡು ಆಕೆ ಅದೇ ಸ್ಥಳದಲ್ಲಿ ತನ್ನನ್ನು ತಾನೇ ಇರಿದುಕೊಂಡು ಸತ್ತಳಂತೆ, ಆಕೆಯ ನೆನಪಿಗಾಗಿ ಇಲ್ಲಿ ಮಾಸ್ತಿಕಲ್ಲನ್ನು ನಿಲ್ಲಿಸಿದ್ದಾರೆ.[೧೦]

**ಬೂದಾಳು** : ದಾವಣಗೆರೆ ಸ್ಮಶಾನದ ರಸ್ತೆಯ ಮೂಲಕ ಈ ಊರಿಗೆ ಹೋಗ ಬೇಕಾಗುತ್ತದೆ ಜನರು. ದಾವಣಗೆರೆಯ ಜನ ಯಾರಿಗಾದರೂ ತಮಾಷೆಗಾಗಿ 'ನೀನು ಸತ್ತು ಹೋಗು' ಎಂದು

ಹೇಳಬೇಕಾದರೆ 'ನೀನು ಬೂದಾಳು ರಸ್ತೆ ಹಿಡಿದು ಹೋಗು' ಎಂಬ ನಂಬಿಕೆಯ ತಮಾಷೆಯ ಮಾತುಗಳನ್ನು ಇಂದಿಗೂ ಜನರ ಬಾಯಲ್ಲಿ ಕಾಣಬಹುದು.

**ಕಿತ್ತೂರು** : ಎಲೇ ಬೇತೂರು ಅಣಜಿ ಗ್ರಾಮದ ಪಕ್ಕದಲೇ ಇರುವ ಗ್ರಾಮವಾಗಿದೆ. ಇಲ್ಲಿ ಬಸವೇಶ್ವರ ದೇವಾಲಯವಿದೆ. ಭಾರತ ಹುಣ್ಣಿಮೆಯಾದ ಐದು ದಿನಕ್ಕೆ ಮೈಲಾರ ಲಿಂಗಪ್ಪನ ಕಾರ್ಣೀಕ ಉತ್ಸವ ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಸಕಲ ವಾಧ್ಯಗಳೊಂದಿಗೆ ದೇವರನ್ನು ಊರ ಹೊರಗಿನ ಮಟ್ಟಿಯಬಳಿ ಪೂಜೆಗೆ ಕೂರಿಸುತ್ತಾರೆ. ಪೂಜಾರಿಯೊಬ್ಬ, ಉಪವಾಸ, ನೇಮಗಳಿಂದ ದೇವರಿಗೆ ಪೂಜೆ ಸಲ್ಲಿಸಿ ಕಾರ್ಣೀಕದ ಕಂಬವನ್ನೇರಿ ಊರಿನ ಒಳಿತು ಕೆಡುಕುಗಳ ಬಗ್ಗೆ ಭವಿಷ್ಯ ನುಡಿಯುತ್ತಾನೆ. ಈ ಗ್ರಾಮದ ಸುತ್ತಮುತ್ತ ಗ್ರಾಮದ ಜನರು ಶ್ರದ್ಧೆ ಭಕ್ತಿಯಿಂದ ನಂಬಿಕೆಗಳನ್ನು ಪಾಲಿಸಿಕೊಂಡು ಬಂದಿರುತ್ತಾರೆ. ಕಾಡಜ್ಜಿ[೧೦] ಆಗಿನ ಕಾಲದಲ್ಲಿ ವೈಶ್ಯಾವೃತ್ತಿಯಲ್ಲಿ ಶ್ರೇಷ್ಠವೆಂದು ಪರಿಗಣಿಸಲಾಗಿದ್ದು, ವಂಶಾಪಾರಂಪರ್ಯವಾಗಿ ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದರೂ ಅವರೂ ಸಾಮಾಜಿಕ ಜೀವನದಲ್ಲಿ ದಾನ-ಧರ್ಮ ಮಾಡಿ ಒಳ್ಳೆಯ ಕೆಲಸ ಮಾಡುತ್ತಿದ್ದರು ಎಂದು ತಿಳಿಯಬಹುದು.

**ಗುಮ್ಮನೂರು** : ಗುಮ್ಮ ಮಕ್ಕಳಿಗೆ ಹೆದರಿಸುವ ಕಾಲ್ಪನಿಕ ಭೂತದ ಹೆಸರಾಗಿದೆ. ಹಿಂದೆ ಜನ ಹಳೆಯ ಊರಿನಲ್ಲಿ ವಾಸಿಸುತ್ತಿದ್ದರು. ಆಗ ಊರಿನ ಒಂದು ಹಸು ದಿನವೂ ಕೆಚ್ಚಲನ್ನು ಬದಿದಾಗಿಸಿಕೊಂಡು ಬರುತ್ತಿತಂತ್ತೆ, ಆಗ ಊರಿನ ಜನರು ಪರೀಕ್ಷಿಸಲೆಂದು ಹಸುವಿನ ಹಿಂದೆ ಒಂದು ದಿನ ಹೋದಾಗ ಹಸು ಒಂದು ಕಡೆ ನಿಂತು ಹಾಲು ಸುರಿಸುತ್ತಿತ್ತು. ಆದರೆ ಆ ಹಾಲನ್ನು ಚಪ್ಪರಿಸಿಕೊಂಡು ಕುಡಿಯುವ ಶಬ್ಧ ಪರೀಕ್ಷಿಸಲು ಹೋದ ಜನರಿಗೆ ಕೇಳಿಸಿತ್ತು. ಆಗ ಅಲ್ಲಿ ಯಾವ ಪ್ರಾಣಿಯೂ, ಪಕ್ಷಿಯೂ ಇರಲಿಲ್ಲ ಹಾಗಾಗಿ ಇದು ಮಹತ್ವದ ಸ್ಥಳವಾಗಿ ಯಾವುದೋ ಗುಮ್ಮ ಬಂದು ಹಾಲು ಕುಡಿಯುತ್ತಿದೆ ಎಂದು ಕೊಂಡ ಜನರು, ಹಸು ಹಾಲುಕರೆದ ಸ್ಥಳದಲ್ಲಿ ಚನ್ನಬಸವೇಶ್ವರನ ದೇವಾಲಯವನ್ನು ನಿರ್ಮಿಸಿಕೊಂಡು ಅಂದಿನಿಂದ ಪೂಜಿಸಿಕೊಂಡು ಬರುತ್ತಿದ್ದಾರೆ. ಹಾಗಾಗಿ ಅಂದಿನಿಂದ ಆ ಸ್ಥಳವನ್ನು ಗುಮ್ಮನೂರು ಎಂದು ಹೆಸರಾಗಿದೆ.

ಇನ್ನೊಂದು ಹೇಳಿಕೆಯಂತೆ ಬಸವಣ್ಣನವರ ಕಾಲದಲ್ಲಿ ಶರಣರು ಸಂಚರಿಸಿದ ಸ್ಥಳವೆಂದು ಚೆನ್ನಬಸವಣ್ಣನ ಗುಡಿ ಕಟ್ಟಿದರೆಂದು ಹೇಳುತ್ತಾರೆ. ಮೊದಲು ಎತ್ತರದಲ್ಲಿ ದಿಬ್ಬದ ಮೇಲಿದ್ದ ಹಳೆಯ ಗುಡಿಯನ್ನು ಈಗ ಹೊಸದಾಗಿ ಸುಂದರವಾಗಿ ನಿರ್ಮಿಸಿದ್ದಾರೆ. ಬಸವೇಶ್ವರನ ವಿಗ್ರಹ ಸಿಂತ ವಿಗ್ರಹವಾಗಿದೆ, ಸ್ಥಳೀಯರ ಹೇಳಿಕೆಯಂತೆ ತೇರಿನಲ್ಲಿ ದೇವರಿಗೆ ಗಿಣ್ಣದ ಎಡೆಯೇ ಆಗಬೇಕಂತೆ, ಒಮ್ಮೆ ಊರಿನ ಹೆಣ್ಣುಮಗಳೊಬ್ಬಳ ಎಳು ಎಮೆಗಳು ಕಳೆದುಹೋದಾಗ ಎಮ್ಮೆಗಳು ಸಿಕ್ಕರೆ ತಪ್ಪದೆ ಗಿಣ್ಣದ ಎಡೆ ಒಪ್ಪಿಸುತ್ತಿನೆಂದು ಹರಕೆ ಮಾಡಿಕೊಂಡಳಂತೆ ಎಮ್ಮೆಗಳು

ಸಿಕ್ಕವು ಆದರೆ ಗಿಣ್ಣದ ಎಡೆ ಒಪ್ಪಿಸಲಿಲ್ಲ.[೧೧] ಆಗ ಬಸವಣ್ಣ ದೇವರಿಗೆ ಸಿಟ್ಟು ಬಂದಿತು. ನೆಟ್ಟಗಿದ್ದ ತಲೆಯನ್ನು ಪಕ್ಕಕ್ಕೆ ಒರಗಿಸಿ ನಿಂತ ನಂತರ ಊರಲ್ಲಿ ಯಾರ ಮನೆಯಲ್ಲಾದರೂ ದನಗಳು ಕರು ಹಾಕಿದರೂ ಮೀಸಲು ಗಿಣ್ಣ ಎಡೆ ಒಪ್ಪಿಸುತ್ತಾರೆ.

**ಮೆಳ್ಳೆಕಟ್ಟೆ** : ಮೆಳ್ಳೆಕಟ್ಟೆಯ ಒಂದು ವಿಶೇಷವೆನೆಂದರೆ ಊರ ಹೋರಗೆ ಬೋರಲಾಗಿ ಬಿದ್ದ ಹನುಮಪ್ಪನ ವಿಗ್ರಹವಿದೆ. ಜನರು ಊರಿಗೆ ಒಂದು ದಿನಗೊತ್ತು ಮಾಡಿ ಊರ ಹೊರಗಿನ ಹನುಮಪ್ಪನನ್ನು ಭಾಜಾಭಜಂತ್ರಿಯೊಂದಿಗೆ ಭಜನೆ ಮಾಡುತ್ತಾ ಅಲ್ಲಿಗೆ ಹೋಗಿ ಹನುಮಪ್ಪನಿಗೆ ಎಣ್ಣೆ ಮಜ್ಜನ ಮಾಡಿಸಿ ಪೂಜೆಮಾಡಿ, ಹಣ್ಣುಕಾಯಿ ಎಡೆಮಾಡಿ, ಭಜನೆ ಮಾಡುತ್ತಾ ಊರೊಳಗೆ ಬರುವ ವೇಳೆಗೆ ಮಳೆಯು ಬಂದೆ ಬರುತ್ತದೆ ಎನ್ನುವ ನಂಬಿಕೆ ಈ ಗ್ರಾಮದವರಿಗೆ ಪೂಜೆಗೆ ವಿದ್ಯಾ ಹನುಮಪ್ಪನ ಪೂಜೆ ಎನ್ನುತ್ತಾರೆ. ಈ ನಂಬಿಕೆಗಳು ಸಮಾಜದ ಕೆಳಗಿನ ಸ್ತರದಿಂದ ಮೇಲ್ತರಗತಿಯವರೆಗೆ ಅಸಂಸ್ಕೃತರಿಂದ ಸುಸಂಸ್ಕೃತದವರೆಗೆ, ವಿದ್ಯಾವಂತರಿಂದ ಅವಿದ್ಯಾವಂತ ವರ್ಗದವರೆಗೆ ಎಲ್ಲ ಬಗೆಯ ಜನರಲ್ಲೂ ಜನಪದ ನಂಬಿಕೆಗಳು ಸದಾ ಪ್ರಜ್ವಲಿಸುವ ನಂದಾದೀವಿಗೆಯಂತೆ ಕಂಗೊಳಿಸುತ್ತಿವೆ ಜನರ ನಂಬಿಕೆಗಳು ಅವರ ಅಭಿವ್ಯಕ್ತಿ ಎಂದು ಕರೆಯಬಹುದಾಗಿದೆ. ಗ್ರಾಮೀಣ ಹಾಗೂ ನಗರ ಭಾಗದ ಅಪಾರ ಜನರು ತಮ್ಮ ಬದುಕಿನಲ್ಲಿ ನಂಬಿಕೆಗಳನ್ನು ನಂಬಿ, ಅವುಗಳನ್ನು ಬೆಳೆಸಿ, ಮತ್ತಷ್ಟು ಬೆಳೆಯುವಂತೆ ಮಾಡುತ್ತಾ ಬರುತ್ತಿದ್ದಾರೆ. ಜನಪದ ನಂಬಿಕೆಗಳು ಜನ ಜೀವನದಲ್ಲಿ ಸೇರಿ ಅವರ ಬದುಕನ್ನು ನಿಯಂತ್ರಿಸುವ ಶಕ್ತಿಯಾಗಿ ಕಾಣುತ್ತದೆ. ನಂಬಿಕೆಗಳನ್ನು 'ಮೂಢನಂಬಿಕೆಗಳು' ಎಂದು ಕರೆಯಲಾಗುತ್ತದೆ.[೧೨] ಈ ಮಾತು ಬೆಳಕಿಗೆ ಬಂದಿರಬಹುದು ಆದರೆ ಮೂಢನಂಬಿಕೆಗಳು ಎಂಬ ಮಾತು ನಂಬಿಕೆಗಳಿಗೆ ಅನ್ವಯವಾಗುವುದಿಲ್ಲ.

ನಂಬಿಕೆಯು ಒಂದು ಮಾನಸಿಕ ಒಪ್ಪಿಗೆಯಾಗಿದ್ದು, ಜನಪದರು ಅದನ್ನು ಕಾಲದಿಂದ ಕಾಲಕ್ಕೆ ನಂಬಿರುವ ನಡೆದುಕೊಂಡು ಬಂದಿರುವ ಭಾವರೂಪವಾಗಿದೆ.[೧೩] ನಂಬಿಕೆಗಳು ಒಬ್ಬರಿಂದ ಇನ್ನೊಬ್ಬರಲ್ಲಿ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹೇಳಿದ ಜನಪದರು ನಡೆಯಲ್ಲಿ ತಂದಿದ್ದಾರೆ. ಮುಂದಿನವರೂ ಮತ್ತೊಬ್ಬರೂ ಅವುಗಳನ್ನು ಕಣ್ಣಾರೆ ಕಂಡು ಆಸೆ ತಾಳಿಯೇ ಜನರ ಮನಸ್ಸಿನ ಸಮಾಧಾನಕ್ಕೋ ಅನುಸರಿಸಿದ್ದಾರೆ.[೧೪] ಜನರು ದೇವರಿಗೆ ಹರಕೆ ಕಟ್ಟಿಕೊಂಡು ನಡೆಯುವವರು. ಬಾಯಿಬೀಗ ಚುಚ್ಚಿಸಿಕೊಳ್ಳುವರು, ಮಕ್ಕಳಿಗೆ ಸಿಡಿಯಾಡಿಸುವವರು, ದೇವರಿಗೆ ಮುಡಿ ಒಪ್ಪಿಸುವವರು, ಸತ್ಯನಾರಾಯಣ ನಾಗರಪೂಜೆಗಳಲ್ಲಿ ನಂಬಿಕೆ ಇಡುವುದನ್ನು ಇಂದಿಗೂ ಕಾಣಬಹುದಾಗಿದೆ.

## ೫.೧ ಹಬ್ಬಗಳು

ನಗರ ಮತ್ತು ಗ್ರಾಮೀಣ ಜನರ ಬದುಕಿನ ಏಕಾತಾಂತೆಗೆ ಬಣ್ಣ ವೈವಿದ್ಯವನ್ನು ಹಬ್ಬಗಳು ತಂದುಕೊಂಡುತ್ತದೆ. ತಮ್ಮ ಬದುಕಿನ ಸಡಗರ ಸಂಭ್ರಮಗಳನ್ನು ಅವರು ಹಬ್ಬಗಳು ಮೂಲಕವೇ ವ್ಯಕ್ತಪಡಿಸುತ್ತಾರೆ.[೧೫] ಗ್ರಾಮ ಹಾಗೂ ನಗರಗಳಲ್ಲಿ ಹತ್ತಾರು ಹಬ್ಬಗಳ ಆಚರಣೆಗಳನ್ನು ಅವರು ವರ್ಷ ಪರ್ಯಾಂತ ಆಚರಿಸುತ್ತಿದ್ದರೂ ಕೆಲವು ಹಬ್ಬಗಳು ಮಹತ್ವವನ್ನು ಪಡೆದುಕೊಂಡಿದೆ. ಉಗಾದಿ ಹಬ್ಬ, ಬಸವನ ಹಬ್ಬ, ನಾಗರಪಂಚಮಿ, ಗೌರಿ ಹಬ್ಬ, ಸಂಕ್ರಾಂತಿ, ಶಿವರಾತ್ರಿ, ದಸರಹಬ್ಬ, ಊರ ದುಗ್ಗಮ್ಮ ಹಬ್ಬ, ಮೊಹರಂ, ರಂಜಾನ್, ಕ್ರಿಸ್‌ಮೆಸ್, ಹೀಗೆ ಹಬ್ಬಗಳನ್ನು ಜನರು ನಡೆಸುತ್ತ ಬಂದಿದ್ದಾರೆ.

ಎಲ್ಲ ಹಬ್ಬಗಳು ಕೃಷಿಯ ವೇಳಪಟ್ಟಿಗೆ ಅನುಗುಣವಾಗಿ ಮತ್ತು ವ್ಯವಸಾಯಗಾರರ ಬದುಕಿನ ಹಿತವನ್ನು ಕಾಪಾಡುವ ಕಾಲಗಳಂತೆ ಜನರು ನಡೆಸಿಕೊಳ್ಳುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಗಳು ಮತ್ತು ಜಾತ್ರೆಗಳು ಒಟ್ಟೊಟ್ಟಿಗೆ ನಡೆಯುತ್ತಿವೆ. ಹಬ್ಬ ಮತ್ತು ಜಾತ್ರೆಗಳು ಬೇರೆ ಬೇರೆಯೆಂದು ಪರಿಗಣಿಸುವುದು ಕಷ್ಟ ಹಬ್ಬದ ಅಂಗವಾಗಿ ಜಾತ್ರೆಯ ನಡೆಯುತ್ತದೆ ಬೇಸಾಯಗಾರನ ಬದುಕಿನ ಅವಿಭಾಜ್ಯ ಅಂಗವಾಗಿ ಹಬ್ಬಗಳು ವಾಸ್ತವಿಕ ಅಂಶಗಳಿಂದ ಕೊಂಡಿವೆ. ಬೇರೆ ಬೇರೆ ಪರಿಸರಗಳಿಗಿಂತ ಹೆಚ್ಚು ಭಿನ್ನವಾಗಿಲ್ಲದಿದ್ದರೂ ಅವುಗಳಲ್ಲಿ ಹುದುಗಿರುವ ವ್ಯವಸಾಯ ಸಂಬಂಧಿಸಿದ ಅಂಶಗಳು ವಿಚಾರ ಮಾಡಬಹುದಾಗಿದೆ.

**ಯುಗಾದಿಯ ಹಬ್ಬ** : ಚಂದ್ರಮಾನ ಯುಗಾದಿ ಚೈತ್ರಮಾಸದಿಂದ ಪ್ರಾರಂಭವಾಗುತ್ತದೆ. ಆದರೆ ಸೂರ್ಯನ ಬಿಸಿಲಿನ ತಾಪವು ಹೆಚ್ಚಾಗಿರುವ ಸಮಯದಲ್ಲಿ ಇರುತ್ತಾನೆ. ಬಿಸಿಲಿನ ಬೇಗೆ ಹೆಚ್ಚಾದರೆ ಹವಾಮಾನದಲ್ಲೂ ಏರುಪೇರಾಗುತ್ತದೆ. ಇದರಿಂದ ಮನುಷ್ಯನ ದೇಹಕ್ಕೆ ಉಷ್ಣ ಸಂಬಂಧವಾದ ಖಾಯಿಲೆಗಳು ಬರುವ ಸಾಧ್ಯತೆ ಹೆಚ್ಚಾಗಿರುತ್ತದೆ.[೧೬] ಜನರು ಬಿಸಿಲಿನ ಬೇಗೆಯ ಪ್ರಾರಂಭಿಕ ದಿನಗಳಲ್ಲೇ ಸೂಕ್ತ ಉಪಾಯವನ್ನು ಅನುಸರಿಸಿದರೆ ರೋಗಗಳನ್ನು ತಡೆಗಟ್ಟಬಹುದು ಎಂದು ಗ್ರಾಮದ ಜನರು ನಂಬಿ ಆಚರಣೆ ಮಾಡಿಕೊಂಡು ಬಂದಿರುವುದನ್ನು ನೋಡಬಹುದು. ಸಿಡುಬು ರೋಗಕ್ಕೆ ಬೇವು ರಾಮಬಾಣ ಹಾಗೆಯೇ ಬೆಲ್ಲಕೊಡ ಕೊಬ್ಬಿನಾಂಶವನ್ನು ಹೆಚ್ಚಿಸುತ್ತದೆ. ಕೊಬ್ಬಿನಾಂಶವು ಬೇಸಿಗೆಯ ಕಾಲದಲ್ಲಿ ಮನುಷ್ಯನ ದೇಹದಲ್ಲಿ ಅತಿ ಕಡಿಮೆ ಇರುತ್ತದೆ ಹೀಗಾಗಿ ಇಂತಹ ಸಮಯದಲ್ಲಿ ಬೆಲ್ಲದ ಸೇವನೆ ಪರಿಣಮಕಾರಿಯಾಗುತ್ತದೆ. ಯುಗಾದಿ ಅಮವಾಸೆಯ ದಿನದಂಡದ ಪ್ರಾರಂಭವಾಗಿ ಅದು ಮೂರು ದಿವಸ ರೊಟ್ಟಿ ಹಬ್ಬ ಎರಡನೇಯ ದಿವಸ ಶಾವಿಗೆ ಪಾಯಸನ್ನು ಊಟ ಮಾಡಿ ಬೇವು ಬೆಲ್ಲ ಹಂಚಿಕೊಂಡು ಹೊಸ ವರ್ಷವನ್ನು ಸಂಭ್ರಮದಿಂದ ಸ್ವಾಗತಿಸುತ್ತಾರೆ. ಅಂದೇ ಮೊದಲ ಬೇಸಾಯ ಹೊನ್ನಾರು ಗ್ರಾಮಗಳ ಜನರು ತಮ್ಮ ಜಮೀನಿನಲ್ಲಿ ಹೂಡಿ ತಮ್ಮ ಕಾಯಕವನ್ನು ಪ್ರಾರಂಭಿಸುತ್ತಾರೆ. ಜನರು ಸಂಜೆ ಚಂದ್ರ ದರ್ಶನ ಪಡೆದು ದೇವಸ್ಥಾನಕ್ಕೆ ಭೇಟಿಯಿತ್ತು ಗುರು ಹಿರಿಯರಿಗೆ ನಮಸ್ಕರಿಸುತ್ತಾರೆ. ಮೂರನೆಯ ದಿನ ಅಂದರೆ ಚಂದ್ರ

ದರ್ಶನದ ಮಾರನೆಯ ದಿವಸ ಹೋಳಿಗೆ ಅಡಿಗೆಯ ಸಂಭ್ರಮ ಚಂದ್ರ ದರ್ಶನವಾಗದಿದ್ದರೆ ಒಂದು ದಿವಸ ಮುಂದೆ ಹೋಗುತ್ತದೆ. ಎಲ್ಲಾ ಜನರು ಸೇರಿ ಒಟ್ಟಿಗೆ ಸಂಭ್ರಮದಿಂದ ಈ ಹಬ್ಬವನ್ನು ಆಚರಿಸುತ್ತಾರೆ.

**ದೀಪಾವಳಿ ಹಬ್ಬ** : ದೀಪಾವಳಿಯ ಎಲ್ಲರ ಜೀವನದ ಬೆಳಕಿನ ಹಬ್ಬ ಎಂದು ಕರೆಯಬಹುದು. ಕತ್ತಲೆಯನ್ನು ಹೋಗಲಾಡಿಸುವ ಹಬ್ಬವಾಗಿದೆ. ದೀಪಾವಳಿಯ ಹಬ್ಬವನ್ನು ನರಕ ಚತುರ್ದಶಿಯಿಂದ ಪ್ರಾರಂಭಿಸಿ ಸಾಮಾನ್ಯವಾಗಿ ಮೂರು ದಿನಗಳವರೆಗೆ ಆಚರಿಸುತ್ತಾರೆ.[೧೩] ದಾವಣಗೆರೆ ಕಸಬಾ ಪರಿಸರದ ಎಲ್ಲೆಡೆಯೂ ದೀಪಾವಳಿಯನ್ನು ಆಚರಿಸುತ್ತಾರೆ. ಬಹಳ ಹಿಂದಿನಿಂದಲೂ ಬಂದಿರುವ ಎಲ್ಲಾ ಮತಧರ್ಮವರೂ ಅನುಸರಿಸುವ ಹಬ್ಬ ದೀಪಾವಳಿಯಾಗಿದೆ. ಬಲಿಯ ರಾಜ್ಯದಲ್ಲಿ ದೀಪ ಹಚ್ಚಿದರೆ ಲಕ್ಷ್ಮೀ ಸ್ಥಿರವಾಗಿರುವುದು, ಹೀಗೆ ದೀಪ ಹಚ್ಚುವುದರಿಂದ ದೀಪಾವಳಿ ಎಂಬ ಹೆಸರು ಬಂದಿದೆ. ದೀಪವೆಂದರೆ ಬೆಳಕು ಮಾತ್ರವಲ್ಲಿ; ಲಕ್ಷ್ಮೀ ಪೂಜೆಯನ್ನು ಆಚರಣೆಯಲ್ಲಿದೆ.

ದೀಪಾವಳಿಯನ್ನು ಕರ್ನಾಟಕ ಎಲ್ಲಾ ಗ್ರಾಮ ಮತ್ತು ನಗರ ಪ್ರದೇಶಗಳಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಬೆಳಕಿನ ಹಬ್ಬ ದೀಪಾವಳಿ ನಮ್ಮನ್ನು ಕತ್ತಲೆಯಿಂದ ಬೆಳಕಿನಡೆ ಮೃತ್ಯುವಿನಿಂದ ಅಮೃತದೆಡೆ ಒಯ್ಯುವ ಬೆಳಕಿನ ಹಬ್ಬ ದೀಪಾವಳಿ ಭಾರತದ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಾಂತ್ಯಭೇದವಿಲ್ಲದೆ ಎಲ್ಲಾ ಹಿಂದೂಗಳು ಬಂಧು ಬಾಂಧವರೊಂದಿಗೆ ಉತ್ಸಾಹದಿಂದ ಆಚರಿಸುವ ದೊಡ್ಡ ಹಬ್ಬ ದೀಪಾವಳಿಯಾಗಿದೆ. ಶರದ್ರುತುವಿನ ಮಧ್ಯಭಗದಲ್ಲಿ ಬರುವ ಈ ಹಬ್ಬದ ಸುಸಮಯ ಅನ್ನದೇವರ ಅವತಾರ ಕಾಲ ಈ ಹಬ್ಬದ ವೇಳೆಗೆ ಮುಂಗಾರು ಬೆಳೆ ಧಾನ್ಯಲಕ್ಷ್ಮೀಯ ರೂಪದಲ್ಲಿ ರೈತನ ಕೈ ಸೇರುಸುತ್ತದೆ. ಮನೆ ಮನೆಯ ಮನ ಮನದ ಕತ್ತಲೆಯನ್ನು ಹೋಗಲಾಸುವ ಈ ಹಬ್ಬದಲ್ಲಿ ಬಂಧು ಬಾಂಧವರ ಸುಮಧುರ ಮಿಲನ ನವ ವಸ್ತದಾರಣ ಸುಗ್ರಾಸ ಭೋಜನ ಮಾಡಿ, ಮನೆಯಲ್ಲಿ ದೀಪ ಹಚ್ಚಿ ಪಟಾಕಿ ಸಿಡಿಸುವ ಸಡಗರದ ಹಬ್ಬವಾಗಿರುತ್ತದೆ.[೧೭] ಒಟ್ಟಾರೆಯಾಗಿ ಪ್ರಾಚೀನ ಕಾಲದ ಭಾಗ್ಯದ ಸ್ಮಾರಕವಾಗಿ ಭವಿಷ್ಯತ್ ಕಾಲದ ಸುಖದ ಸಂಕೇತವಾಗಿ ವರ್ತನಮಾನ ಕಾಲದ ಸಂಪತ್ತಿನ ಸ್ಮರಣೆಯಾಗಿ ಆತ್ಮೋನ್ನತಿಯ ಮಾರ್ಗವಾಗಿ ಅಜ್ಞಾನವನ್ನು ಹೊಡದೋಡಿಸಿ ಸುಜ್ಞಾನವನ್ನು ಪಡೆಯುವ ಕುರುಹಾಗಿ ಬಲೀಂದ್ರನಂಥ ತ್ಯಾಗ ಜೀವಿಯ ಸವಿನೆನಪಿಗಾಗಿ ಆಚರಿಸುವ ಬೆಳಕಿನ ಹಬ್ಬವೇ ದೀಪಾವಳಿಯಾಗಿದೆ.

**ನಾಗರಪಂಚಮಿ ಹಬ್ಬ** : ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅನೇಕ ವೃಕ್ಷ ಪ್ರಾಣಿ ಪಕ್ಷಿಗಳನ್ನು ಸರ್ಪ ವಿಶೇಷವಾದ ದಿವ್ಯ ಶಕ್ತಿಗಳ ಪೂಜಾ ಸಂಕೇತವಾಗಿ ಪೂಜಿಸಲ್ಪಟ್ಟಿದೆ. ಗಣಪತಿಯ ಹೊಟ್ಟೆಯ ಪಟ್ಟಿಯಾಗಿ ಶಿವನ ಆಭರಣವಾಗಿ ವಿಷ್ಣುವಿನ ಹಾಸಿಗೆಯಾಗಿ ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲ್ಲಿನ ಹೆಡೆಯಾಗಿ ಸಮುದ್ರ ಮಂಥನ ಕಾಲದಲ್ಲಿ ಮಂಧಾದ ಪರ್ವತವೆಂಬ ಕಡಗೋಲಿಗೆ ಹಗ್ಗವಾಗಿ ಚಿನ್ನೆಯಾಗಿ ಭೂಮಿಯನ್ನು ಹೊತ್ತ ಅದಿಶೇಷನಾಗಿ ಪಾರ್ಶ್ವನಾಥ

ತೀರ್ಥಂಕರ ಶಿರೋಲಾಂಛನವಾಗಿ ಪೂಜಿಸಲ್ಪಟ್ಟಿದೆ.[೧೭] ನಾಗಪಂಚಮಿ ಹೆಚ್ಚಾಗಿ ಮಹಿಳೆಯರು ಮಕ್ಕಳಿಗೆ ಹಬ್ಬ ಅವರಿಗೆ ಮಾಂಗಲ್ಯ ಪ್ರದ ಸಂತಾನ ಪ್ರದ ಎಂಬುದು ನಂಬಿಕೆ ಇದು ಹುತ್ತಗಳಿಗೆ ನಾಗರ ಕಲ್ಲುಗಳಿಗೆ ತುಪ್ಪ ಮತ್ತು ಹಾಲೆರೆದು ಪೂಜಿಸುತ್ತಾರೆ.

**ಗೌರಿ–ಗಣೇಶ ಹಬ್ಬ** : ಭಾದ್ರಪದ ಶುದ್ಧ ಚತುರ್ಥಿ ಹಿಂದುಗಳಿಗೆ ಗಣಪತಿಯ ಹಬ್ಬದ ದಿನವಾಗಿದೆ. ಅಂದು ಈ ದೇವರಿಗೆ ವರ್ಷದಲ್ಲೇ ವಿಶೇಷವಾದ ವಾರ್ಷಿಕ ಪೂಜೆ ದಿನ ಗ್ರಾಮದೇವರೆಲ್ಲಾ ಒಟ್ಟಿಗೆ ಸೇರಿಕೊಂಡು ಗಣಪತಿಯ ಮಣ್ಣಿನ ಲೇಪನ ಮಾಡಿದ ಮೂರ್ತಿಯನ್ನಾಟ್ಟು ಪೂಜಿಸುತ್ತಾರೆ.[೧೮] ಪ್ರಾರಂಭದಲ್ಲಿ ಗೌರಿ ಪೂಜೆಯನ್ನು ಕುಟುಂಬದ ಮಹಿಳೆಯರು ವಿಶೇಷವಾಗಿ ಮಾಡುತ್ತಾರೆ. ನಂತರ ಗಣಪತಿಯ ಮಣ್ಣಿನ ಮೂರ್ತಿ ಮಾಡಿದ, ಬಣ್ಣ ಬಣ್ಣಗಳಿಂದ ಅಲಂಕರಿಸಿದ ಸುಂದರವಾದ ಮಂಟಪ ಕಟ್ಟಿ ಬೀದಿ, ಕೇರಿಗಳು, ಗ್ರಾಮಗಳಲ್ಲಿ ಮೆರವಣಿಗೆಯ ಸಮೇತ ಗಣಪತಿ ವಿಗ್ರಹವನ್ನು ತಂದು, ಫಲ ಪುಷ್ಪಗಳು ಕಡುಬು ಪಂಚ ಕಜ್ಜಾಯ ನೈವೇದ್ಯ ಪದ್ಧತಿ, ಇಂದಿನ ನಗರಗಳಲ್ಲಿ ಗಣಪತಿ ಹಬ್ಬವು ವಿಶೇಷವಾದ ರಂಗು ರಂಗಿನ ಬಣ್ಣಗಳಿಂದ ಮೆರವಣಿಗೆ ಮಾಡುವ ಧ್ವನಿವರ್ಧನೆಯನ್ನು ವಿಜೃಂಭಣೆಯಿಂದ ಆಚಾರಿಸುತ್ತಾರೆ. ನಮ್ಮ ದೇಶದಲ್ಲಿ ಬಹುಶಃ ಗಣಪತಿಯ ದೇವಾಸ್ಥಾನ ಇಲ್ಲದ ಗ್ರಾಮಗಳಿಲ್ಲ ನಗರಗಳಿಲ್ಲ ಬೀದಿಗಳಿಲ್ಲ ಹಾಗೆಯೇ ಗಣೇಶನ ವಿಗ್ರಹವಿಲ್ಲದ ಗೃಹವಿಲ್ಲ ನಮ್ಮ ಹಿರಿಯರ ನಂಬಿಕೆ ಆಚರಣೆಯಂತೆ ಶೂಭಕಾರ್ಯ ಕೈಗೊಳ್ಳುವ ಮೊದಲು ಗಣಪತಿಗೆ ವಿಶೇಷವಾದ ಪ್ರಥಮ ಪೂಜೆಯನ್ನು ಸಲ್ಲಿಸುವ ವಾಡಿಕೆ ಇದೆ. ಅಲ್ಲದೆ ವಿಘ್ನನಿವಾರಕ ಎಂದು ಕರೆಯುತ್ತಾರೆ.

**ಮಕರ ಸಂಕ್ರಾಂತಿ ಹಬ್ಬ** : ಸೂರ್ಯನು ಭೂಮಿಯ ಮೇಲಿನ ಎಲ್ಲಾ ಚಟುವಟಿಕೆಗಳಿಗೂ ಅಧಾರ, ಇಂತಹ ಸೂರ್ಯ ಒಂದು ರಾಶಿಯಿಂದ ಮತ್ತೊಂದು ರಾಶಿಯನ್ನು ಪ್ರದೇಶಿಸುವ ಸಂಧಿಕಾಲಕ್ಕೆ 'ಸಂಕ್ರಾಂತಿ' ಎಂದು ಹೆಸರು ಸಂಕ್ರಾಂತಿ ಒಂದು ವಿಧದಲ್ಲಿ ಸೂರ್ಯದಾನೆಯಾಗಿದೆ.

**ಮಹಾಶಿವರಾತ್ರಿ ಹಬ್ಬ** : ಶಿವನ ಅರಾಧನೆ ಋಗ್ವೇದದಷ್ಟು ಪುರಾತನವಾದದ್ದು ಸ್ಕಂದ, ಪದ್ಮ, ಗರುಡ ಪುರಾಣಗಳಲ್ಲಿ ಮಹಾಶಿವರಾತ್ರಿ ಆಚರಣೆಯ ಉಲ್ಲೇಖ ಕಂಡು ಬರುತ್ತದೆ. ಈ ದಿನ ಬೇಡರ ಕೃಷ್ಣಪ್ಪ ಎಂಬ ಭಕ್ತ ಅರಿವಿಲ್ಲದೆ ಶಿವನನ್ನು ಆರ್ಚಿಸಿದ ಎಂಬ ಕಥೆಯೂ ಇದೆ. ಶೈವರು ಉಪವಾಸವನ್ನು ಆಚರಿಸಿ, ಉಪವಾಸ ಮಾಡುತ್ತಾರೆ.[೧೯] ರಾತ್ರಿಯಲ್ಲಿ ಪ್ರತಿ ಯಾಮದಲ್ಲೂ ಬಿಲ್ವಪತ್ರೆಯಿಂದ ಶಿವನನ್ನು ಪೂಜಿಸುವ ವಿಧಿ ವಿಧಾನ ಇದೆ. ಅನೇಕ ಪುಣ್ಯಕ್ಷೇತ್ರಗಳಲ್ಲಿ ರಥೋತ್ಸವವೂ ನಡೆಯುತ್ತದೆ.

**ಹೋಳಿ ಹಬ್ಬ ಅಥವಾ ಕಾಮನ ಹಬ್ಬ** : ಇದು ಕರ್ನಾಟಕದಲ್ಲಿ ಆಚರಣೆಯಲ್ಲಿರುವ ಒಂದು ಜನಪದ ಹಬ್ಬವಾಗಿದೆ. ಹಳೆಯ ವಸ್ತುಗಳನ್ನು ಹೋಳಿಗಾಗಿ ಸಂಗ್ರಹಿಸುವುದು. ಕುಳ್ಳು ಕಟ್ಟಿಗೆ ಕಳ್ಳತನಮಾಡಿ

ತರುವುದು, ಕಾಮದಹನದ ಬೇರೆ ಬೇರೆ ಕಾರ್ಯಕ್ಕಾಗಿ ಹಳ್ಳಿಗಳಲ್ಲಿ ಬೇರೆ ಬೇರೆ ಜನರಿರುತ್ತಾರೆ. ಇವರೆಲ್ಲರ ಮೇಲೆ ಹೋಳಿಯ ನಾಯಕ ಎಂಬ ಹಿರಿಯವಾನಿರುತ್ತಾನೆ. ಇತ್ಯಾದಿಗಳು ಜನಪದ ಸಂಪ್ರದಾಯಗಳು ಕಾಮನಹಬ್ಬಕ್ಕೆ ಪೌರಾಣಿಕ ಅಂಶಗಳೂ ಸೇರಿವೆ ಅವುಗಳೆಂದರೆ ಪರಮೇಶ್ವರನು ಉಗ್ರತ ತಸ್ಸಿಗೆ ಭಂಗ ತಂದರಿಂದ ಶಿನಿಗೆ ಕೋಪ ಬಂದು ಮನ್ಮಥ ಸಿಕ್ಕು ಬೆಂದುಹೋದ, ಅನಂತರ ರತಿಯ ಮೇಲಿನ ಕನಿಕರದಿಂದ ಕಾಮ ಅನಾಂಗನಾಗಿ ಬಾಳುವಂತೆ ಶಿವನು ಅರ್ಶೀವಾದ ನೀಡಿದ ಈ ಕಲ್ಪನೆ ರತಿ–ಮನ್ಮಥರನ್ನು ಮೊದಲು ಪೂಜಿಸಿ, ನಂತರ ಕುಣಿದು ಅನಂತರ ಕಾಮನನ್ನು ರಾತ್ರಿಯಲ್ಲಿ ಮನತರನ್ನು ಮೇರಲು ಪೂಜಿಸಿ, ಹಾಡಿ ಕುಣಿದು ಅನಂತರ ಕಾಮನನ್ನು ರಾತ್ರಿಯಲ್ಲಿ ಬೆಂಕಿಯಲ್ಲಿ ಸುಡುವ ಆಚರಣೆ ಕರ್ನಾಕಕದ ಎಲ್ಲಾ ಪರಿಸರದಲ್ಲಿ ಕಂಡು ಬರುತ್ತದೆ.[೨೦]

**ಬಕ್ರೀದ್ ಹಬ್ಬ** : ಅರಬ್ಬಿ ಭಾಷೆಯಲ್ಲಿ ಬಕರ್ ಎಂದರೆ ಹಸು ಅಥವಾ ಎತ್ತು ಎಂಬರ್ಥವಾಗಿದೆ. ಈದ್ ಎಂದರೆ ಹಬ್ಬ ಎಂದು ಅರ್ಥೈಸಬಹುದಾಗಿದೆ. ಒಟ್ಟಾರೆ ಅಲ್ಲಾಹನ ಹೆಸರಿನಲ್ಲಿ ಹಸು ಅಥವಾ ಎತ್ತನ್ನು ಬಲಿಕೊಡುವ ದಿವಸದ ಆಚರಣೆಯೇ ಬಕ್ರೀದ್ ಇಬ್ರಾಹಿಂ ಖಲೀಲುಲ್ಲಾರವರ ಕಾಲದಿಂದಲೂ ಈ ಬಕ್ರೀದ್ ಆಚರಣೆ ಕಾಣಬಹುದಾಗಿದೆ. ಖಲೀಲುಲ್ಲಾರಿಗೆ ಇಸ್ಲಾಮಿಲ್ ಎಂಬ ಮಗನಿದ್ದನು ಬಲಿದಾನದ ಬದ್ಧತೆಯನ್ನು ಈ ಹಬ್ಬದ ದಿನ ಸ್ಮರಿಸಿ ಗೌರವಿಸಲಾಗುತ್ತದೆ.

**ಈದ್ ಮಿಲಾದ್ ಹಬ್ಬ** : ಮಹಮ್ಮದೀಯ ಧರ್ಮ ಸ್ಥಾಪಕರಾದ ಪ್ರವಾದಿ ಮಹಮ್ಮದ್ ಪೈಗಂಬರ್ ಜನ್ಮ ದಿನವೇ ಈದ್ ಮಿಲಾದ್, ಎಂದರೆ ಜನ್ಮ, ಈದ್ ಎಂದರೆ ಹಬ್ಬ, ಮೂರನೆಯ ಮಾಸಲಾದ ರೆಬಿಯುಲ್ ಅವಲ್‌ನ ಹನ್ನೆರಡನೆಯ ದಿನ ಈ ಹಬ್ಬವನ್ನು ಆಚಾರಿಸುತ್ತಾರೆ.

**ಮೊಹರಂ ಹಬ್ಬ** : ದಾವಣಗೆರೆ ನಗರ ಮತ್ತು ಪಕ್ಕದ ಗ್ರಾಮಗಳಲ್ಲಿ ಮೊಹರಂ ಹಬ್ಬವನ್ನು ಸಂಡಗರದಿಂದ ಆಚಾರಿಸುವುದನ್ನು ಕಾಣಬಹುದು. ಈ ಹಬ್ಬದಲ್ಲಿ ಮುಸ್ಲಿಂ ಜನಾಂಗದ ವರೂ ಮೊಹರಂ ದಿನದಂದು ಕಠಿಣ ನಿಯಮಗಳನ್ನು ಪಾಲಿಸುತ್ತಾರೆ. ಇವರು ಹಬ್ಬದ ಆಚರಣೆಯ ಸಂದರ್ಭದಲ್ಲಿ ಮಧ್ಯ ಮಾಂಸವನ್ನು ಮುಟ್ಟುವುದಿಲ್ಲ ಸೇವನೆ ಮಾಡುವುದಿಲ್ಲ ಹೆಣ್ಣು ಮಕ್ಕಳು ಹೂವು ಮುಡಿಯುವುದಿಲ್ಲ ಮತ್ತು ಅವರು ಬರಿಗಾಲಿನಲ್ಲಿ ನಡೆಯಬೇಕು.[೨೧] ಹಬ್ಬದ ದಿನದಂದು ಇವರು ತಮ್ಮ ಮನೆಗಳ ಬಾಗಿಲು ಮುಚ್ಚುವುದಿಲ್ಲ. ಅಂದು ವಿಶೇಷವಾದ ಸಂತಾನ ಭಾಗ್ಯವಿಲ್ಲದವರಿಗೆ ಉಡಿ ತುಂಬುವ ಪದ್ಧತಿ ನಡೆಯುತ್ತದೆಂದು ಕಾಣಬಹುದಾಗಿದೆ.

ಮಸಿದೀಗಳ ಎದುರಿಗೆ ಮೂರು ಅಲಾಯಿ ಕುಣಿಗಳನ್ನು ಪ್ರತಿ ವರ್ಷ ತೆಗೆಯುವುದು, ಮೊಹರಂ ಹಬ್ಬವನ್ನು ಹತ್ತು ದಿನಗಳ ಕಾಲ ಆಚಾರಿಸುತ್ತಾರೆ. ಚಂದ್ರ ದರ್ಶಿನ ಎಂಬ ಹಬ್ಬದ ಮೊದಲ ಕಾರ್ಯದ ನಂತರ ಅಲಾಯಿ ಕುಣಿಗೆ ಗುದ್ದಲಿ ಹಾಕಿ ಪೂಜೆಯಿಂದ

ಪ್ರಾರಂಭವಾಗುತ್ತದೆ. ಕೆಂಡಾರ್ಚನೆಯ ಸೇವೆಯನ್ನು ಮಾಡುವುದು ಮೊಹರಂ ಹಬ್ಬದ ವಿಶೇಷ, ಇದನ್ನು ಹಬ್ಬದ ಒಂಬತ್ತನೇ ದಿನ ರಾತ್ರಿ ಅಲಾಯಿ ಕಂಣಿಗೆ ಕಟ್ಟಿಗೆಯನ್ನು ಹಾಕಿ ಬೆಂಕಿ ಹಚ್ಚಿ ಕೆಂಡವನ್ನು ಸಿದ್ಧಪಡಿಸುತ್ತಾರೆ. ಕುಡಿಗೆ ಪೂಜೆ ಆಡಿ ಕೆಂಡ ಹಾಯುವ ಹರಕೆಗಳನ್ನು ಭಕ್ತರು ಈಡೇರಿಸುತ್ತಾರೆ. ನೃತ್ಯ ಕಲಾವಿದರು ಅಥವಾ ವೇಷಧಾರಿಗಳು ಕುಣಿಯ ಸುತ್ತಾ ಇಡೀ ರಾತ್ರಿ ನೃತ್ಯ ಮಾಡುತ್ತಾರೆ. ದಾವಣಗೆರೆ ನಗರದಲ್ಲಿ ಪ್ರತಿವರ್ಷ ಮೊಹರಂ ಹಬ್ಬವನ್ನು ಸಂಗಡರದಿಂದ ಮುಸ್ಲಿಂ ಜನಾಂಗದವರು ಆಚಾರಿಸುತ್ತಾರೆ.[೨೨] ಹಿಂದೂಗಳು ಸಹ ಈ ಹಬ್ಬದಲ್ಲಿ ಪಾಲುಗೊಳ್ಳುವುದು ವಿಶೇಷವಾಗಿದೆ.

**ರಥೋತ್ಸವ**

ರಥ ಅಥವಾ ತೇರು[೨೩] ಎಳೆಯುವುದು ಬಹುತೇಕ ಜಾತ್ರೆಗಳ ಮುಖ್ಯಭಾಗವಾಗಿದೆ. ದೇವರ ಮೂರ್ತಿಯನಿಟ್ಟು ಮೆರವಣಿಗೆ ಮಾಡುವ ವಿಶಿಷ್ಟ ವಾಹನಗಳನ್ನು ಮಾತ್ರ ತೇರು ಎಂದು ಕರೆಯುತ್ತಾರೆ. ತೇರು ಅಥವಾ ರಥೋತ್ಸವ ಪ್ರಧಾನವಾದ ಜಾತ್ರೆಗಳು ಅದೇ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಕುಕ್ಕವಾಡ ತೇರು, ಹದಡಿ ತೇರು, ಕೊಕ್ಕನೂರು ತೇರು, ಮುಂತಾದವುಗಳು, ಹೀಗೆ 'ತೇರಾದ ಮೇಲೆ ಜಾತ್ರೆ ನೆರೆಯಿತು' ಎಂಬ ಜನಪದದ ಗಾದೆಯನ್ನು ನೆನಪಿಗೆ ತರುತ್ತದೆ. ಇವರು ಇಹಲೋಕದಿಂದ ಪರಲೋಕಕ್ಕೆ ಸೇರುವ ಪ್ರತೀಕವೇ ತೇರು[೨೪] ಎಂದು ಭಾವಿಸುತ್ತಾರೆ. ಈ ಹಿನ್ನೆಲೆಯಲ್ಲಿ ದಾವಣಗೆರೆಯ ಪರಿಸರದಲ್ಲಿ ಹಲವು ದೇವರುಗಳ ರಥೋತ್ಸವವು ಕೂಡ ಜರುಗುತ್ತದೆ.

**ತೋಳಹುಣಸೆ** : ಈ ಗ್ರಾಮವು ದಾವಣಗೆರೆ ಪರಿಸರಕ್ಕೆ ಹೊಂದಿಕೊಂಡತೆ ಇರುವ ೩ ಕಿ.ಮೀ ದೂರವಿರುವ ಪ್ರದೇಶದಲ್ಲಿ ಪುರಾತನ ಕುಂಭಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದು, ಶಿವರಾತ್ರಿ ಹಬ್ಬದಲ್ಲಿ ತೇರು ನಡೆಯುತ್ತದೆ. ಒಂದು ವಿಶೇಷವೇನೆಂದರೆ ಪಕ್ಕದ ಬೆಳವನೂರು ಗ್ರಾಮದ ನಾಯಕ ಜನಾಂಗದವರು ಎಡೆ ತಂದ ಮೇಲೆಯೇ ತೇರು ಎಳೆಯುತ್ತಾರೆ.

**ದೇವರಿಗೆ ಗಿಣ್ಣದ ಎಡೆ** : ಬಸವೇಶ್ವರನ ವಿಗ್ರಹ ನಿಂತ ವಿಗ್ರಹವಾಗಿದೆ. ಸ್ಥಳೀಯರ ಹೇಳಿಕೆಯಂತೆ ತೇರಿನಲ್ಲಿ ದೇವರಿಗೆ ಗಿಣ್ಣದ ಎಡೆಯೇ ಆಗಬೇಕಂತೆ. ಒಮ್ಮೆ ಊರಿನ ಹೆಣ್ಣುಮಗಳೊಬ್ಬಳ ಎಳು ಎಮ್ಮೆಗಳು ಕಳೆದುಹೋದಾಗ ಎಮ್ಮೆಗಳು ಸಿಕ್ಕರೆ ತಪ್ಪದೆ ಗಿಣ್ಣದ ಎಡೆ ಒಪ್ಪಿಸುತ್ತೇನೆಂದು ಹರಕೆ ಮಾಡಿಕೊಂಡಳಂತೆ. ಎಮ್ಮೆಗಳು ಸಿಕ್ಕವು. ಆದರೆ ಗಿಣ್ಣದ ಎಡೆ ಆ ಹೆಣ್ಣುಮಗಳು ಒಪ್ಪಿಸಲಿಲ್ಲ. ನಂತರ ಬಸವಣ್ಣ ದೇವರಿಗೆ ಸಿಟ್ಟುಬಂತು, ನೆಟ್ಟಗಿದ್ದ ತಲೆಯನ್ನು ಪಕ್ಕಕ್ಕೆ ಒರಗಿಸಿತತ್ತೆ, ನಂತರ ಊರಲ್ಲಿ ಯಾರಮನೆಯಲ್ಲಾದರೂ ದನಗಳು ಕರು ಹಾಕಿದರೂ ಮೀಸಲು ಗಿಣ್ಣ ಎಡೆ ಒಪ್ಪಸುತ್ತಾರೆ. ಪ್ರತಿವರ್ಷ

ದಶಮೀ ನಕ್ಷತ್ರದಲ್ಲಿ ಬಸವೇಶ್ವರನ ತೇರು ಬಹಳ ವೈಭವದಿಂದ ನಡೆಯುತ್ತದೆ. ಜವುಳ, ಬಾಯಿಬೀಗ, ದಿಂಡು ಮುಂತಾದ ಸೇವೆಗಳು ನಡೆಯುತ್ತವೆ. ಕಾರ್ತೀಕೋತ್ಸವ ನಡೆಯುತ್ತದೆ.[೨೫] ಇಲ್ಲಿ ದೀಪಾರಾಧನೆಯ ದಿನ ಸಂಕ್ರಾಂತಿಯವರೆಗೂ ಊರಿನ ನಾಯಕರ ಹೆಣ್ಣುಮಕ್ಕಳು ದೇವರ ಪದ ಹಾಡ್ತಾರೆ. ಬಾಳೆ ದಿಂಡಿನಲ್ಲಿಯೇ ಸುಂದರ ಮಂಟಪ ನಿರ್ಮಿಸಿರುತ್ತಾರೆ.

ಇದೇ ದೇವಾಲಯದ ಬಳಿ ರಂಗಪ್ಪ ಸ್ವಾಮಿಯ ಚಿಕ್ಕಗುಡಿ ಕಂಡು ಬರುತ್ತದೆ. ಮೂಡ್ಲಬಸಪ್ಪನ ಕಲ್ಲಿನ ಚಿಕ್ಕಗುಡಿ ಇದೆ. ಇನ್ನೋಂದು ಹೇಳಿಕೆಯಂತೆ ಗುಮ್ಮನೂರಿನ ಜನ ಹೇಳುವಂತೆ ಗುಮ್ಮ-ಮಕ್ಕಳಿಗೆ ಹೆದರಿಸುವ ಕಾಲ್ಪನಿಕ ಭೂತ. ಹಿಂದೆ ಜನ ಹಳೆಯ ಊರಿನಲ್ಲಿ ವಾಸಿಸುತ್ತಿದ್ದರು, ಊರಿನ ಹಸು ದಿನವೂ ಕೆಚ್ಚಲನ್ನು ಬರಿದಾಗಿಸಿಕೊಂಡು ಬರುತ್ತಿತ್ತು. ಇದನ್ನು ಪರೀಕ್ಷಿಸಲೆಂದು ಹೋದಾಗ ಹಸು ಒಂದು ಕಡೆ ನಿಂತು ಹಾಲು ಸುರಿಸುತ್ತಿತ್ತು. ಅಲ್ಲಿ ಗ್ರಾಮದ ಜನರು ನೋಡಿದ್ದಾಗ ಯಾವ ಪ್ರಾಣಿ ಪಾಕ್ಷಿಯೂ ಕಾಣಿಸಲಿಲ್ಲ. ಆದರೆ ಆ ಹಾಲನ್ನು ಚಪ್ಪರಿಸಿಕೊಂಡು ಕುಡಿಯುವ ಶಬ್ದ ಕೇಳುತ್ತಿತ್ತು. ಆಗ ಜನರು ಇದು ಮಹತ್ವದ ಸ್ಥಳ ಯಾವುದೋ ಗುಮ್ಮ ಬಂದು ಹಾಲು ಕುಡಿಯುತ್ತಿದೆ ಎಂದುಕೊಂಡು ಹಸು ಹಾಲುಕರೆದ ಸ್ಥಳದಲ್ಲಿ ಚನ್ನಬಸವೇಶ್ವರನ ದೇವಾಲಯ ನಿರ್ಮಿಸಿದ್ದಾರೆ.

### ೫.೨ ಜಾತ್ರೆ-ಉತ್ಸವಗಳು

ಸುಗ್ಗಿ ಮುಗಿದ ನಂತರ ಗ್ರಾಮೀಣ ಜನರ ಕೈಯಲ್ಲಿ ಹಣವಿರುವ ಸಮಯದಲ್ಲಿ ಜಾತ್ರೆ ನಡೆಸುತ್ತಾರೆ. ಜಾತ್ರೆಗಳು ಭೌತಿಕವಾಗಿ ಎತ್ತರದ ಸ್ಥಳಗಳಲ್ಲಿ ಇಲ್ಲವೇ ವಿಶಾಲವಾದ ಸ್ಥಳಗಳಲ್ಲಿ ಜನರಿಗೆ ಬಂದು ಹೋಗಲು, ಉಳಿದುಕೊಳ್ಳಲು ಅನುಕೂಲವಾಗುವಂತ ಊರಿನ ಪರಿಸರದಲ್ಲಿ ಏರ್ಪಡಿಸುತ್ತಾರೆ. ಗ್ರಾಮೀಣ ಜನರಿಗೆ ನಿತ್ಯ ಜೀವನಕ್ಕೆ ಬೇಕಾಗುವ ಅವಶ್ಯಕವಾದ ಸಾಮಾಗ್ರಿಗಳು ಅವರ ಊರಿನಲ್ಲಿ ದಿನಲೂ ಸಿಗುವುದಿಲ್ಲ. ಹಾಗಾಗಿ ಇಂತಹ ವಸ್ತುಗಳನ್ನು ಹೊಂದಿದ ಅಂಗಡಿಗಳಾದ ತಾಮ್ರ, ಹಿತ್ತಾಳೆ, ಜಾತ್ರೆಗಳು ಬೆಳ್ಳಿಯ ಸಾಮಾನುಗಳು ದೇವರ ಮೂರ್ತಿಗಳು, ರೈತರ ಒಕ್ಕಲುತನದ ಸಾಮಾನುಗಳು ಗ್ರಾಮೀಣ ಜಾತ್ರೆಗಳಲ್ಲಿ ಕಂಡು ಬರುತ್ತದೆ.[೨೬] ಕೆಲವು ಗ್ರಾಮೀಣ ಮತ್ತು ನಗರ ಜಾತ್ರೆಗಳಲ್ಲಿ ಬೃಹತ್ ಪ್ರಮಾಣದ ದನಗಳ ವ್ಯಾಪಾರ ನಡೆಯುತ್ತದೆ. ಆ ಗ್ರಾಮದ ಯುವಕರು ಜಾತ್ರೆಯ ಕಾರ್ಯಕರ್ತರಾಗಿ ಕೆಲಸ ನಿರ್ವಹಿಸುವುದನ್ನು ಜಾತ್ರೆಯಲ್ಲಿ ನೋಡಬಹುದು.

'ಜಾತ್ರೆ' ಎಂಬ ಪದ 'ಯಾತ್ರೆ' ಯ ತದ್ಭವ, ಆದರೆ ಜಾತ್ರೆಯ ಸ್ಥಳಗಳಲ್ಲಿ ಸಾಮಾನ್ಯವಾಗಿ ಯಾತ್ರಾಸ್ಥಳವಾಗಿರುತ್ತವೆ. ನಿಘಂಟುಗಳು ಸಹ ಜಾತ್ರೆಯ ಕುರಿತಾಗಿ ಹೀಗೆ ತಿಳಿಸುತ್ತದೆ. ಪುಣ್ಯ ಕ್ಷೇತ್ರದ ದರ್ಶನ ಮಾಡುವ ಯಾತ್ರೆಯೆಂದೇ ಉಲ್ಲೇಖಿಸಿದೆ. ಜನರು ವರ್ಷದಲ್ಲಿ ಒಂದು ನಿದಿಷ್ಟ ಸಮಯದಲ್ಲಿ ತಾವು ಬೇಡಿಕೊಂಡ ಸ್ಥಳದಲ್ಲಿ ನೆರೆಯುವ ಜನಸಮೂಹಕ್ಕೆ ಜಾತ್ರೆ ಎಂದು

ಕರೆಯುತ್ತಾರೆ. ಉದಾಹರಣೆಗೆ ನಮ್ಮ ಹಿರಿಯರು ಜನಜಾತ್ರೆಯನ್ನು ನೋಡಿ ಹೇಳುವ ಮಾತು ಜನ ಮರುಳೋ ಜಾತ್ರೆ ಮರುಳೋ, ಜಾತ್ರೆ ಎಂಬುದು ಮೋಜು, ಉಲ್ಲಾಸ ಮನರಂಜನೆಯ ನೀಡುವ ಒಂದು ಅಂಗವಾದರೆ ಇನ್ನೊಂದು ಎಲ್ಲಾರನ್ನು ಸಾಮರಸ್ಯ ಕಾಪಾಡಿಕೊಂಡು ಪ್ರೀತಿ ಪ್ರೇಮ ವಿಶ್ವಾಸ ನಂಬಿಕೆಯಿಂದ ಒಟ್ಟಾಗಿ ಬದುಕುವ ಲಕ್ಷಣವಾಗಿದೆ. ಜನರಲ್ಲಿ ಹಬ್ಬಕ್ಕೂ ಜಾತ್ರೆಗೂ ನಿಕಟವಾದ ಸಂಬಂಧವಿದೆ. ಧರ್ಮದ ತಳಹದಿಯ ಮೇಲೆ ಹಬ್ಬಗಳು ನಡೆಯುತ್ತವೆ. ಆದರೆ ಹಬ್ಬಗಳೇ ಮುಂದುವರೆದು ಜಾತ್ರೆಗಳಾಗಿ ಪರಿವರ್ತನೆ ಪಡೆದಿರುತ್ತವೆ. ಹೀಗಾಗಿ ಜಾತ್ರೆ ಹಬ್ಬ ಸಾಮಾನ್ಯವಾಗಿ ಜನರು ಆಚರಣೆಗೆ ಒಳಪಡುವ ಸಂಪ್ರದಾಯವಾಗಿದೆ.[೨೭] ಜಾತ್ರೆಯಲ್ಲಿ ಊರಿನ ಜನರು ಬೇರೆ ಊರಿನಿಂದ ಬರುವಂತಹ ಜನರು ಸೇರಿ ಜಾತ್ರೆಯಲ್ಲಿ ಮನರಂಜನೆಗಾಗಿ ಕುಸ್ತಿ, ಟಗರುಗಳ ಕಾಳಗ, ಭಾರ ಜಗ್ಗುವುದು ನಾಟಕ, ಇನ್ನೂ ಹಲವಾರು ಕಲೆಗಳನ್ನು ನಡೆಸುತ್ತಾರೆ. ಇದನ್ನು ಕಂಡ ಜನಪದರು ಸಾಮಾನ್ಯವಾಗಿ ಈ ಗಾದೆ ಮಾತು ಹೇಳುತ್ತಾರೆ. ಹಬ್ಬ ಊಟಕ್ಕೆ ಚೆಂದ, ಜಾತ್ರೆ, ನೋಟಕ್ಕೆ ಚೆಂದ.

ಪ್ರೊ॥ ದೇ. ಜವರೇಗೌಡ ಅವರು ಹೇಳುವಂತೆ ಜಾತ್ರೆಯ ಯಾವುದಾದರೊಂದು ದೇವರ ಹೆಸರಿನಲ್ಲಿ ಆಗಾಗ್ಗೆ ನಡೆಯುವ ಬೇರೆ ಬೇರೆ ಕಡೆಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಹಬ್ಬ. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವನ್ನೊಲಿಸಿಕೊಳ್ಳುವ ಸತತ ಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಪ್ರಾರಂಭದಲ್ಲಿ ಜಾತ್ರೆ ಸುಪ್ರಸಿದ್ಧ ತೀರ್ಥ ಕ್ಷೇತ್ರಗಳಲ್ಲಿ ನಡೆಯುತ್ತದೆಯೆಂದು ತೋರುತ್ತದೆ. ಪಾಪ ಪರಿಹಾರಕ್ಕಾಗಿ ದೇಶದ ಮೂಲೆ ಮೂಲೆಗಳಿಂದ ಜನ ಅಂತಹ ಕ್ಷೇತ್ರಗಳಲ್ಲಿ ಅಪಾರ ಸಂಖ್ಯೆಯಲ್ಲಿ ಸೇರುತ್ತಿದ್ದರು. ಅನಂತರ ಕೆಲವು ಹಬ್ಬಗಳಲ್ಲಿ ನಿಯಮ ಅಥವಾ ಅನಿಯಕಾಲದಲಿ ಅದ್ದೂರಿಯಿಂದ ಜರುಗುತ್ತಿದ್ದ ದೊಡ್ಡ ಹಬ್ಬಗಳಲ್ಲಿ ನೆಂಟರಿಸ್ಥರ ಜೊತೆಗೆ ಶ್ರದ್ಧಾವಂತ ಜನರು ಬರಲಾರಂಭಿಸಿದರು. ದೇವರು ಪ್ರಭಾವಶಾಲಿ ಎನಿಸಿದರತು ಜನರ ಗದ್ದಲವೂ ಅಧಿಕವಾಗುತ್ತಿತ್ತು. ಒಂದು ದಿನದ ಹಬ್ಬ ಮೂರು ಅಥವಾ ಹೆಚ್ಚು ದಿನಗಳಿಗೆ ಹಬ್ಬುತ್ತಾ ಕುಣಿತ ಮರೆತಗಳು ಕೂಡಿಕೊಂಡು, ಮುದ್ದು ಪಟಾಕಿಗಳ ವೈಭವ ಆಕರ್ಷಕವಾಗಿದ್ದು, ಅಂಗಡಿ ಮುಂಗಟ್ಟುಗಳು ಜಮಾಯಿಸಿ ಜನಮರುಳಾಗಿ ಪರೀಕ್ಷೆ ಸೇರಿದಾಗ ಅದು ಜಾತ್ರೆಯೆಂದು ನಾಮಕರಣಕ್ಕೆ ಯೋಗ್ಯವಾಯಿತು. ಕೊನೆಗೆ ರೈತರ ನಾಡಿಯಂತಿರುವ ದನಗಳ ನೆರವಿಯು ಸಂಘಟನೆಗೊಂಡಗ ಪದ ಅರ್ಥ ವಿಶಾಲವಾಯಿತು. ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ವಾಣಿಜ್ಯ ಮುಖವನ್ನು ರೂಪಸಿಕೊಂಡಾಗ ಜಾತ್ರೆಯಾಯಿತು. ಜಾತ್ರೆಯನು ಧಾರ್ಮಿಕ, ಮನರಂಜನೆ ಮತ್ತು ವ್ಯವಹಾರದ ನಿತ್ಯ ಬದುಕಿಗೆ ಬಹಳ ಉಪಯುಕ್ತವಾದ ತಾತ್ಕಾಲಿಕ ಜನ ಸಂಘಟಿತ ಸಂಸ್ಥೆಯೆಂತಲೂ ಕರೆಯಬಹುದಾಗಿದೆ. ಇಂದು ಜಾತ್ರೆಗಳು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿರುವುದು ವಿಷಾದನೀಯ ವಿಷಯವಾಗಿದೆ. ಅದರೂ ಜಾತ್ರೆಗಳು ಇಂದಿಗೂ ನಡೆದು ಬರುತ್ತವೆ. ದೇವರ ಮೆರವಣಿಗೆ ಉತ್ಸವ ಮನರಂಜನೆಯ ಮಾಧ್ಯಮಗಳನ್ನು ಜಾತ್ರೆಯು ಒಳಗೊಂಡಿರುವುದರಲ್ಲಿ ಅರ್ಥವನ್ನು ಕಾಣಬಹುದು.[೨೮]

ಹೆಣ್ಣು ಮಾತೃದೇವತೆ, ಶಕ್ತಿ ಸ್ವರೂಪಿಣಿ, ಜಗನ್ಮಾತೆ, ಭೂದೇವಿ ಎನ್ನುವ ಸಂಸ್ಕೃತಿ ಭಾರತೀಯರದ್ದು ಪ್ರಾಚೀನಕಾಲದಿಂದಲೂ ಮಾತೃದೇವೋಭವ ಎನ್ನುವ ಮೊದಲ ಆದ್ಯತೆ ಹೆಣ್ಣಿಗೆ ನೀಡಿರುವುದನ್ನು ಕಾಣಬಹುದಾಗಿದೆ ಇಲ್ಲಿ ಹೆಣ್ಣು ದೇವತೆಗಳ ಬಗ್ಗೆ ಹೇಳುವುದಾದರೆ ಪ್ರತಿ ಊರಿಗೂ ಒಬ್ಬ ಗ್ರಾಮ ದೇವತೆ ಇರುತ್ತಾಳೆ. ಈ ದೇತೆಗಳು ಸ್ವಾತಿಕ ಗುಣದವರಿರಬಹುದು. ಸ್ವಾತಿಕ ಸ್ವರೂಪಿಣಿಯರೆಂದರೆ ಲಕ್ಷ್ಮೀ, ಸರಸ್ವತಿ, ಗೌರಿ ನಾರಾಯಣಿ ಪಾರ್ವತಿ ಇತ್ಯಾದಿಯಾಗಿದ್ದರೆ. ಕ್ಷುದ್ರ ಉಗ್ರದೇವತೆಗಳೆಂದರೆ ದುರ್ಗಿ, ಮಾರಿ, ಕರಿಯಮ್ಮ, ಯಲ್ಲಮ್ಮ, ಉಚ್ಚಂಗೆಮ್ಮ ಇತ್ಯಾದಿ ಹೆಸರುಗಳಿಂದ ಶಕ್ತಿ ದೇವತೆಗಳಿರುತ್ತಾರೆ. ಪ್ರಸ್ತುತದಲ್ಲಿ ನಮ್ಮ ದಾವಣಗೆರೆಯ ನಗರ ದೇವತೆಯೆಂದರೆ ಉಗ್ರ ಮತ್ತು ಸಾತ್ವಿಕ ಶಕ್ತಿ ಸ್ವರೂಪಿಣಿ ದಾವಣಗೆರೆ ದುಗ್ಗಮ್ಮ ಈಕೆಗೆ ದುಗ್ಗಮ್ಮ, ದುರುಗಮ್ಮ, ದುರ್ಗಾಂಬಿಕೆ ಎಂದೆಲ್ಲಾ ಹೆಸರುಗಳಿವೆ.[೨೯] ದಾವಣಗೆರೆಗಷ್ಟೆ, ಅಲ್ಲ ಇಡೀ ತಾಲ್ಲೂಕಿನ ಪ್ರಮುಖ ದೇವತೆಯಾಗಿರುವುದನ್ನು ನಾವು ಕಾಣಬಹುದಾಗಿದೆ.

**ಐತಿಹ್ಯ :** ದಾವಣಗೆರೆಯ ಹಳೆಯ ಊರಿನಲ್ಲಿ (ದಾವಣಗೆರೆಯ ಪ್ರಾರಂಭದ ಸ್ಥಳದಲ್ಲಿ) ದೇವತೆಯ ಗುಡಿ ಕಂಡು ಬರುತ್ತದೆ. ಈ ದೇವತೆಯ ಬಗ್ಗೆ ಅನೇಕ ಐತಿಹ್ಯಗಳು ಪವಾಡಗಳು ಜನರಿಂದ ಕೇಳಬಹುದಾಗಿದೆ. ಈ ದೇವಿಯ ಮೂಲನೆಲೆ ದಾವಣಗೆರೆಗೆ ಹತ್ತಿರದ ಗ್ರಾಮ ದುರ್ಗಾಪುರ ಅಥವಾ ದುಗ್ಗತ್ತಿ. ಈ ದುಗ್ಗಾವತಿಯಿಂದ ಎತ್ತಿನ ಬಂಡಿಯಲ್ಲಿ ಕುಳಿತು ದುಗ್ಗಮ್ಮ ದಾವಣಗೆರೆ ಸಂತೆಗೆ ಬರುವಾಗ ಇದ್ದಕ್ಕಿದ್ದ ಹಾಗೆ ಬಂಡಿ ಮುಂಗಾಲದ್ದರಿಂದ ಬಂಡಿಯವನು ದಾರಿಯಲ್ಲಿದ್ದ ದುಂಡು ಕಲ್ಲನ್ನು ಬಂಡಿಯಲ್ಲಿಟ್ಟುಕೊಂಡು ದಾವಣಗೆರೆಗೆ ಈಗಿರುವ ದುಗ್ಗಮ್ಮನ ಗುಡಿ ಬಳಿಗೆ ಬಂದರು. ಆದರೆ ಇದ್ದಕ್ಕಿದ್ದ ಹಾಗೆ ಬಂಡಿ ಮುರಿದು ದುಂಡುಕಲ್ಲು ನೆಲಕ್ಕೆ ಬಿದ್ದಾಗ ಜನ ನೋಡಲು ಬಂದಾಗ ದುಗ್ಗಮ್ಮ ಚಿಕ್ಕ ಹುಡುಗನ ಮೇಲೆ ಅವೇಶಗೊಂಡು ನನಗೆ ಈ ಸ್ಥಳ ಇಷ್ಟವಾಗಿದೆ. ನಾನು ಇಲ್ಲಿಯೇ ನೆಲೆಸುತ್ತೇನೆ ನನಗೊಂದು ಗುಡಿ ಕಟ್ಟಿಸಿ, ನನ್ನ ಪೂಜೆ ಮಾಡಿ ನಾನು ಎಲ್ಲರನ್ನೂ ರಕ್ಷಿಸುತ್ತೇನೆ ಎಂದು ಅಪ್ಪಣೆಯಾದಾಗ ಮಾಡಿದಾಗ ಆಗ ಸ್ಥಳೀಯರು ಅಲ್ಲಿಯೇ ಇದ್ದ ಬೇವಿನ ಮರದ ಕೆಳಗೆ ಚಿಕ್ಕ ಗುಡಿಯನ್ನು ಕಟ್ಟಿ ಆ ದುಂಡುಕಲ್ಲನ್ನೇ ದೇವಿಯೆಂದು ದುಗ್ಗಮ್ಮನೆಂದು ಪೂಜಿಸುತ್ತಾ ಜನರು ಬಂದಿದ್ದಾರೆ.[೩೦] ದಾವಣಗೆರೆಯ ಜನರು ಇಂದು ಈ ದೇವಿಗೆ ೧೯೩೪ರಲ್ಲಿ ವಿಶಾಲವಾದ ದೇವಾಲಯವನ್ನು ಮರು ನಿರ್ಮಿಸಿದ್ದಾರೆ.

**ಜಾತ್ರೆ :** ದಾವಣಗೆರೆ ದುಗ್ಗಮ್ಮನಿಗೆ ಎರಡೂ ವಿಧದ ಪೂಜೆಗಳು ನಡೆಯುತ್ತವೆ. ಈ ದೇವಿಯ ಎರಡು ವರ್ಷದ ನಂತರ ಮೂರನೇ ವರ್ಷದಲ್ಲಿ ಜಾತ್ರೆ ನಡೆಯುತ್ತದೆ. ಮೊದಲು ಮೂರು ದಿನ ಜಾತ್ರೆ ಆಚರಿಸುತ್ತಿದ್ದರು. ಈಗ ಹದಿನೈದು ದಿನಗಳವರೆಗೆ ದೊಡ್ಡ ಜಾತ್ರೆಯಾಗುತ್ತೆ. ಈ ಜಾತ್ರೆಯ ಸಂದರ್ಭದಲ್ಲಿ ಕೋಣನ ಬಲಿಗೆ ನಿಷೇದವಿದ್ದರೂ ಹೇಗೋ ಊರ ಸುತ್ತಮುತ್ತಲಿನ ಪರಿಸರದಲ್ಲಿ

ಕೋಣನ ಬಲಿಯಾಗುತ್ತೆ. ಕೋಣನ ಬಲಿಯಾದಾಗ ಅದರ ರಕ್ತ ಮಾಂಸಗಳನ್ನು ಪಾದಗಟ್ಟೆಯ ಬಳಿ ಜೋಳದ ರಾಶಿಗೆ ಕಲಸಿ, ಇದಕ್ಕೆ ಚದರಂಗ ಎನ್ನುತ್ತಾರೆ. ಸೂರ್ಯೋದಯವಾಗುವುದರೊಳಗೆ ಪುಟ್ಟಿಯಲ್ಲಿ ತುಂಬಿಕೊಂಡು ಹುಲಿಗ್ಯೋ ಎಂದು ಕೂಗುತ್ತಾ ಕೇಕೆ ಹಾಕುತ್ತಾ ಊರ ತುಂಬಾ ಕಾಳುಗಳನ್ನು ಚೆಲ್ಲುತ್ತಾ ಇದರಿಂದ ಊರಿಗೆ ಶಾಂತಿಯಾಗುತ್ತದೆ ಎಂದು ನಂಬಿಕೆಯಿದೆ. ಈ ಜಾತ್ರೆಯ ಸಮಯದಲ್ಲಿ ಸುಮಾರು ೫೦ ಸಾವಿರದಿಂದ ೭೫ ಸಾವಿದರದವರೆಗೂ ಕುರಿ, ಮೇಕೆ, ಕೋಳಿ, ಎಮ್ಮೆ, ಕೋಣಗಳು ಬಲಿಯಾಗುತ್ತದೆ. ಕೆಳವರ್ಗದ ಜನರು ಶ್ರದ್ಧ ಭಕ್ತಿಯಿಂದ ಈ ಜಾತ್ರೆಯನ್ನು ಆಚರಿಸುತ್ತಾರೆ ಮತ್ತು ಮೇಲು ವರ್ಗದ ಜನರು  ಸಹ ಜಾತ್ರೆಯನ್ನು ಆಚರಿಸುತ್ತಾರೆ.[೩೧] ಆಗಾಗ ಅಂದರೆ ಮಂಗಳವಾರ ಶುಕ್ರವಾರ, ಕಾರ್ತಿಕ ದಸರೆ, ಹುಣ್ಣಿಮೆ ದಿನಗಳಂದು ದೇವಿಗೆ ವಿಶೇಷ ಪೂಜೆ ನಡೆಯುತ್ತದೆ. ಜಾತ್ರೆ ಸಮಯದಲ್ಲಿ ದೇವಿಗೆ ಚಂಡಿಕಾ ಹೋಮ ನಡೆಯುತ್ತೆ. ಭಕ್ತರು ಹರಕೆ ಎಂದು ಬೇವಿನ ಉಡುಗೆ ತೊಡುತ್ತಾರೆ. ದಿಂಡು ಉರಳು ಸೇವೆ ಸಲ್ಲಿಸುತ್ತಾರೆ. ಈ ದುಗ್ಗಮ್ಮ ದೇವಾಲಯದಲ್ಲಿ ಮೂರು ಗರ್ಭಗುಡಿಗಳಿವೆ. ಬಲಭಾಗದಲ್ಲಿ ವಿಘ್ನೇಶ್ವರ ಎಡಭಾಗದಲ್ಲಿ ಬ್ರಹ್ಮ ನಾರಾಯಣ ಸಪ್ತ ಮಾತೃಕೆಯಂದಿದ್ದಾರೆ. ಮಧ್ಯ ದುಗ್ಗಮ್ಮ ನೆಲೆಸಿದ್ದಾಳೆ. ಕರಿಯ ಕಲ್ಲಿನ ವಿಗ್ರಹ ತುಂಬಾ ಸುಂದರವಾಗಿದೆ.

**ಮಹೇಶ್ವರ ಜಾತ್ರೆ**

ದಾವಣಗೆರೆ ಕಸಬಾ ಪರಿಸರದ ಗ್ರಾಮಗಳಲ್ಲಿ ಡಿಸೆಂಬರ್ ಕೊನೆಯ ವಾರದಲ್ಲಿ ಮತ್ತು ಅಧಿಕ ವರ್ಷ ಬಂದಾಗ ಜನವರಿಯ ಮೊದಲ ವಾರದಲ್ಲಿ ಮಹೇಶ್ವರ ಜಾತ್ರೆ ಆಚರಣೆ ಮಾಡುವ ಪದ್ಧತಿ ಕಾಣಬಹುದಾಗಿದೆ ವಿಶೇಷವಾಗಿ ಮಹೇಶ್ವರ ಜಾತ್ರೆಯ ಆಚರಣೆ ಶೈವ ಸಂಪ್ರದಾಯದ ಒಂದು ಭಾಗವಾಗಿದೆ. ವಿಶೇಷವಾಗಿ ಮಹೇಶ್ವರ ಜಾತ್ರೆಯ ಆಚರಣೆ ಶೈವ ಸಂಪ್ರದಾಯದ ಒಂದು ಭಾಗವಾಗಿದೆ. ಶೈವರು ಹಾಗೂ ಶಿವನ ಆರಾಧಕರು ಮಾತ್ರ ಆಚರಣೆ ಮಾಡುವಂತಹ ಸಂಪ್ರದಾಯ ಬೆಳೆದು ಬಂದಿದೆ. ಮುಖ್ಯವಾಗಿ ದಕ್ಷಿಣ ಕರ್ನಾಟಕದಲ್ಲಿ ಅಂದರೆ ತುಮಕೂರು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಹೊಳಲ್ಕೆರೆ ತಾಲ್ಲುಕುಗಳಲ್ಲಿ ನೊಳಂಬ ವೀರಶೈವ ಲಿಂಗಾಯಿತರು ಈ ಹಬ್ಬದ ಆಚರಣೆಯನ್ನು ಮಾಡುತ್ತಾ ಬಂದಿದ್ದಾರೆ. ದಾವಣಗೆರೆ ಶಿವಮೊಗ್ಗ ಜಿಲ್ಲೆಗಳಲ್ಲಿ ಲಿಂಗಾಯಿತ ಜನಾಂಗದ ಎಲ್ಲಾ ಉಪ ಪಂಗಡಗಳು ಮಹೇಶ್ವರ ಜಾತ್ರೆಯನ್ನು ಆಚರಣೆ ಮಾಡುವುದನ್ನು ಕಾಣಬಹುದಾಗಿದೆ. ದಾವಣಗೆರೆ ಕಸಬಾ ಪರಿಸರದ ಗ್ರಾಮಗಳಲ್ಲಿ ಡಿಸೆಂಬರ್ ಕೊನೆಯ ವಾರದಲ್ಲಿ ಊರ ಹೊರಗಡೆ ನೀರಿನ ಸಂಪನ್ಮೂಲ ಇರುವ ಸ್ಥಳಗಳಲಿ ಗದ್ದುಗೆಯನ್ನು ಪೂಜಿಸುವ ಪದ್ಧತಿಯನ್ನು ನಾವು ಗಮನಿಸಬಹುದಾಗಿದೆ.[೩೨] ಮಹೇಶ್ವರ ಶಿವ ಇವು ಒಂದೇ ಅರ್ಥದ ಪದಗಳು ಇವುಗಳಿಂದ ನಿಷ್ಪವಾದ ಮಹೇಶ್ವರ ಮಹೇಶ್ವರನಿಗೆ ಸಂಬಂಧಿಸಿದ ಶೈವ ಶಿವನಿಗೆ ಸಂಬಂಧಿಸಿದ ಪದಗಳೂ ಸಹಜವಾಗಿ ಒಂದೇ ಅರ್ಥ ನೀಡುತ್ತಾರೆ.

ಪ್ರಸ್ತುತ ನನ್ನ ಸಂಪ್ರಬಂಧದಲ್ಲಿ ಮಹೇಶ್ವರ ಜಾತ್ರೆಯನ್ನು ಮತ್ತು ಆಚರಣೆಯನ್ನು ಮಾಡುವಂತಹ ಗ್ರಾಮಗಳು ವಿವರಗಳು ಮುದಹದಡಿ, ಬಸಾಪುರ, ಹೊಸಬಿಸಲೇರಿ, ನಾಗನೂರು ದಾವಣಗೆರೆ, ಶ್ಯಾಬನೂರು, ಬೆಳವನೂರು, ಕುಕ್ಕವಾಡ, ವಡರಹಳ್ಳಿ, ಹಳೇಬಿಸಲೇರಿ, ಬಸವನಾಳ್ ಈ ಗ್ರಾಮಗಳಲ್ಲಿ ಆಚರಣೆಯನ್ನು ಮಾಡುತ್ತಾರೆ. ವಿಶೇಷವಾಗಿ ಮುದಹದಡಿ, ಬಸಾಪುರ ಮತ್ತು ನಾಗನೂರು ಮೂರು ಊರುಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ಮತ್ತು ಸಡಗರದಿಂದ ಈ ಜಾತ್ರೆಯನ್ನು ಆಚರಣೆ ಮಾಡುತ್ತಾರೆ. ಎಳ್ಳು ಅಮವಾಸ್ಯೆಯನ್ನು ನೋಡಿಕೊಂಡು ಹಬ್ಬದ ದಿನವನ್ನು ನಿಗದಿಗೊಳಿಸುತ್ತಾರೆ. ಕೆಲವು ಊರುಗಳಲ್ಲಿ ಒಂದು ವಾರ ಕಾಲ ಹಬ್ಬದ ಚಟುವಟಿಕೆಗಳು ನಡೆದರೆ, ಕೆಲವು ಊರುಗಳಲ್ಲಿ ಒಂದೇ ದಿನದಲ್ಲಿ ಮುಗಿಸಿಕೊಂಡು ಬರುತ್ತಾರೆ.[೩೩] ಮುಖ್ಯವಾಗಿ ಚನ್ನಬಸವೇಶ್ವರ ಹಾಗೂ ಬಸವೇಶ್ವರದೇವರ ಅರಾಧನೆಯನ್ನು ಮಾಡುತ್ತಾರೆ.

**ಆಂಜನೇಯ ಸ್ವಾಮಿ ಉತ್ಸವ** : ಹಳೇಬಾತಿ ಗ್ರಾಮದಲ್ಲಿ ಪ್ರತಿವರ್ಷವು ರಥೋತ್ಸವ ಜರಗುತ್ತದೆ. ಪ್ರತಿವರ್ಷವು ಗ್ರಾಮದ ಜನರ ಅನುಕೂಲಕ್ಕೆ ಸಾಮೂಹಿಕ ವಿವಾಹ ಬೇರೆ ಬೇರೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ರಥೋತ್ಸವ ಸಂದರ್ಭದಲ್ಲಿ ಕಂಕಣ ಧಾರಣೋತ್ಸವು ಬಣಕಾರ ಮನೆಯವರಿಂದ ಶ್ರೀ ಸ್ವಾಮಿಗೆ ಅರಿಶಿಣ ಎಣ್ಣೆ ನೀಡಿ ನಡೆಯಲಿದ್ದು, ದೊಡ್ಡಬಾತಿ ಶ್ರೀ ಬೀರಲಿಂಗೇಶ್ವರ ಸ್ವಾಮಿಯನ್ನು ಕರೆತರಲಾಗುವುದು, ನಂತರ ಗೌಡ್ರು ಮನೆಯವರಿಂದ ಶ್ರೀ ಸ್ವಾಮಿಗೆ ಅರಿಶಿಣ ಎಣ್ಣೆ, ಕಳಸಾರೋಹಣ ಕಾರ್ಯಕ್ರಮ ನಂತರ ಶ್ರೀ ಸ್ವಾಮಿಯ ಕುಣಿಯುವ ಕುದುರೋತ್ಸವ ನಡೆಯಲಿವೆ. ರಥೋತ್ಸವದಂದು ಬೆಳಿಗ್ಗೆ ಸ್ವಾಮಿಯ ಆನೆ ಉತ್ಸವ, ಹರಿಸೇವೆ, ಬಾಯಿಗೆ ಬೀಗ ನಂತರ ಸಂಜೆ ದೊಗ್ಗಳ್ಳಿ ಶ್ರೀ ಆಂಜನೇಯ ಸ್ವಾಮಿಯನ್ನು ದೇವಸ್ಥಾನಕ್ಕೆ ಕರೆತರಲಾಗುವುದು. ಅಂದು ರಾತ್ರಿ ಸ್ವಾಮಿಯ ಮಹಾ ರಥೋತ್ಸವ ಜರುಗಲಿದೆ.[೩೪] ಮರುದಿನ ಬೆಳಿಗ್ಗೆ ಭೂತದೇವರ ಸೇವೆ, ಗಂಗಾಪೂಜೆ ಮುಗಿಸಿಕೊಂಡು ದೇವಸ್ಥಾನಕ್ಕೆ ಆಗಮಿಸುವುದು ವಾಡಿಕೆಯಾಗಿದೆ.

**ಕೋದಂಡ ರಾಮ** : ದಾವಣಗೆರೆಯ ನಗರದ ಹರಿಕಾರ ರಾಜನಹಳ್ಳಿ ಶ್ರೀ ಹನುಮಂತಪ್ಪನವರು ಕಟ್ಟಿಸಿರುವ ಶ್ರೀ ಕೋದಂಡರಾಮ ದೇವಸ್ಥಾನದಲ್ಲಿ ಪ್ರತಿವರ್ಷ ರಾಮೇಶ್ವರ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಅಂದಿನ ದಿನ ಬೆಳಿಗ್ಗೆ ಶ್ರೀ ರಾಮಾಯಣ ಪುರಾಯಣ, ಪುರಾಣ ಪ್ರವಚನ, ಮೃತ್ಯುಂಜಯ ಜಪ, ನವಗ್ರಹ ಜಪ, ಸೂರ್ಯ ನಮಸ್ಕಾರ ಹಾಗೂ ಸಂಜೆ ಹರಿಕಥಾ ಶ್ರವಣ, ಮಂತ್ರಪುಷ್ಪ ರಾಜಾಶೀರ್ವಾದ ಪೂರ್ವಕ ಮಹಾಮಂಗಳಾರತಿ ನಡೆಯುತ್ತದೆ.

**ಕರಿಯಾಂಬಿಕಾ ದೇವಿ ಜಾತ್ರೆ** : ದಾವಣಗೆರೆಯ ಒಂದು ಭಾಗವಾಗಿರು ಗ್ರಾಮ ನಿಟ್ಟುವಳ್ಳಿ ಇಲ್ಲಿ ಹಿಂದೂ–ಮುಸ್ಲಿಂ, ಕ್ರೈಸ್ತರು ಜನಾಂಗದವರು ಒಟ್ಟಾಗಿ ವಾಸಿಸುತ್ತಿರುವ ಪ್ರದೇಶವಾಗಿದೆ. ನಾವೆಲ್ಲರೂ ಒಂದೇ ಎಂದು ಗುಣವನ್ನು ಹೊಂದಿರುವ ಜನರು. ಯಾವುದೇ ಹಬ್ಬ, ಜಾತ್ರೆ, ವಿಶೇಷ ಕಾರ್ಯಕ್ರಮಗಳಲ್ಲಿ ಯಾವುದೇ ಬೇದ ಭಾವವಿಲ್ಲದೆ ಒಟ್ಟಿಗೆ ಸೇರಿ ಆಚರಿಸುತ್ತಾರೆ.[೩೫] ಎಲ್ಲಾ

ಜಾತಿಯ ಜನರು ಈ ಪ್ರದೇಶದಲ್ಲಿ ಇಂದು ವಾಸವಾಗಿದ್ದಾರೆ. ದಾವಣಗೆರೆಯ ಅಭಿವೃದ್ಧಿಗೆ ಎಲೆಮರಿಯ ಕಾಯಿಯಂತೆ ನಿಟ್ಟುವಳ್ಳಿಯ ಪರಿಸರವು ಕಾರಣವಾಗಿದೆ.

**ಪ್ರಾಣಿ ಬಲಿ :** ಪ್ರಾಣಿ ಬಲಿಯು ನರಬಲಿಯ ಮುಂದುವರಿಕೆಯಾಗಿ ಕಂಡು ಬಂದಿದೆ. ಗ್ರಾಮಗಳಲ್ಲಿ ಕಾಯಿಲೆಗಳು ಕಾಲರಾ, ಸಿಡುಬಿನ ಬೇನೆ, ದನಕರುಗಳಿಗೆ ಬಾಯಿಯ ಕಾಲಿನ ಕಾಯಿಲೆಗಲು ಕಾಣಿಸಿಕೊಂಡರೆ ಊರಿನ ಶಕ್ತಿ ದೇವತೆ ನಮ್ಮ ಮೇಲೆ ಕೋಪಗೊಂಡಿರುವ ಎಂದು ಗ್ರಾಮದ ಮಾರಮ್ಮ, ದುಗ್ಗಮ್ಮ,[೩೨] ಕರಿಯಮ್ಮ, ಚೌಡಮ್ಮ, ಹೀಗೆ ಅನೇಕ ದೇವತೆಗಳಿಗೆ ಊರಿನ ಜನರು ಹರಕೆ ಹೊತ್ತು ಪರಾಣಿ ಬಲಿಯನ್ನು ಕೊಡುವುದಾಗಿ ಹೇಳಿ ಕೊಟ್ಟು ಮನೆಗೆ ತಪ್ಪಾದೆ ಆ ದೇವತೆಗೆ ವಾರ, ಹಬ್ಬ, ಜಾತ್ರೆಯೆಂದು ಕೋಣ ಕುರಿ, ಮೇಕೆ, ಎಮ್ಮೆ, ಕೋಳಿಗಳನ್ನು ಬಲಿಯನ್ನು ಕೊಡುತ್ತಾನೆ.

**ಗಾವು ಸಿಗಿಯೋದು :** ಗಾವು ಎಂದರೆ ಗಂಡು ಮೇಕೆ ಅಥವಾ ಕರಿ ಕುರಿ ಮರಿಯನ್ನು ಕೇತುರಾಜ ತನ್ನ ಹುಲ್ಲುಗಳಿಂದ ಕಚ್ಚಿ ತಿನ್ನುವ ಅದರ ದೇಹದ ಚರ್ಮವನನು ಸಂಪೂರ್ಣವಾಗಿ ಸುಲಿಯುವುದಕ್ಕೆ ಗಾವು ಕಟ್ಟುವುದು. ಗಾವು ಸಿಗಿಯೋದು ಎನ್ನುತಾರೆ.[೩೩] ಗಾವು ಪದವು ಗಟ್ಟಿಯಾಗಿ ಹಿಡಿದುಕೊಳ್ಳುವ ಭೂತಬಲಿ ಹರಿಯುವುದು ಸಿಗಿಯೋದು ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಕರ್ನಾಟಕದಲ್ಲಿ ಗ್ರಾಮದೇವತೆಗಳ ಜಾತ್ರೆಯಲ್ಲಿ ವರ್ಷಕ್ಕೊಮ್ಮೆ ನಡೆಯುತ್ತದೆ. ಇದಕ್ಕೆ ಉತ್ತ ಕರ್ನಾಟಕದ ಪ್ರದೇಶಗಳಲ್ಲಿ ಹರಿಮರಿ ಹರಿಯೊದು ಎಂದು ದಕ್ಷಿಣ ಕರ್ನಾಟಕದಲ್ಲಿ ಗಾವುಸಿಗಿತು ಗಾವುಸಿಯಹೋದು ಎಂದು ಕರೆಯುವುದನ್ನು ನೋಡಬಹುದಾಗಿದೆ. ದಕ್ಷಿಣ ಕರ್ನಾಟಕದಲ್ಲಿ ಗಂಗೆ ಮತಸ್ಥ ಮ್ಯಾಸೆಯ ಬೇಡರ ನಾಯಕ ಜಾತಿಯವರು ಗಾವು ಸಿಗಿಯೋದು ನೆರವೇರಿಸುತ್ತಾರೆ.

ಗಾವು ಸಿಗಿಯೋದು ಎಂದರೆ ಕೆಳಜಾತಿಯ ವ್ಯಕ್ತಿಯು ನಿರ್ದಿಷ್ಟಪಡಿಸಿರುವ ಗ್ರಾಮದ ವ್ಯಕ್ತಿಯ ಮನೆಯಿಂದ ಒಂದು ಗಂಡು ಮೇಕೆ ಅದು ಕಪು ಇರಬೇಕು ಎಂದು ನಿಯಮವಿದೆ ತಂದು ಕೇತರಾಜನಿಗೆ ಕಾಣದಂತೆ ಬುಟ್ಟಿಯ ಹೊಳಗಡೆ ಬಚ್ಚಿಡುತ್ತಾರೆ. ಪೊತರಾಜನ್ನು ಇದನ್ನು ಹುಡುಕಿ ಗಾವುಸಿಗಿಯೋವ ಜಾಗಕ್ಕೆ ತರುತ್ತೇನೆ ಆ ಮೇಕೆಯನ್ನು ಅಲ್ಲಿ ನೆರೆದ ಊರ ಜನರ ಮುಂದೆ ಆ ಮೇಕೆಯನ್ನು ಕೈಯಲ್ಲಿ ಹಿಡಿದು ಮುಂದಾಡಿ ವಾದ್ಯಗಳ ಸಪ್ಪಳದಿಂದ ಈತನ ಅವೇಶ ಇನ್ನಷ್ಟು ಜಾಸ್ತಿಯಾಗಿ ತನ್ನ ಬರೀ ಮೈಗೆ ಚಾಟಿಯಿಮದ ಬಾರಿಸಿಕೊಳ್ಳುತ್ತಾ ಮೇಕೆಯನ್ನು ತನ್ನ ಕೈಯಲ್ಲಿ ಪಟು ಹಿಡಿದು ಅದರ ಕೆಳದುಟಿಯ ಚಾರ್ಮವನ್ನು ಹಲ್ಲಿನಿಂದ ಕಚ್ಚಿ ಹಿಡಿದು ಅದರ ಇಡಿಯಾದ ದೇಹದ ಚರ್ಮವನ್ನು ಬಾಯಿಯಿಂದಲೆ ಸುಲಿದು ಬಿಸಾಕಿದ ಬಲಿಯ ಜೊತೆ ವಾದ್ಯಗಳ ಸದ್ದಿಗೆ ತಕ್ಕಂತೆ ಕುಣಿದು ಅದು ಇನ್ನು ಜೀವಂತವಿರುವಾಗಲೆ ಗುಂಡಿಯಲ್ಲಿ ಮುಚ್ಚುವನು ಈ ಆಚರಣೆಯ ಮಾರಮ್ಮ ದುರ್ಗಮ್ಮನ ಹೆಸರಿನಲ್ಲಿ ದಾವಣಗೆರೆ ಪರಿಸರದ ಎಲೆ ಬೇತೂರಲ್ಲಿ ಪ್ರತಿ ವರ್ಷವೂ ಏಪ್ರಿಲ್ ಮೇ ತಿಂಗಳು ಜಾತ್ರೆಯಲ್ಲಿ ಗಾವು ಸಿಗಿಯೋದು ಕಂಡು ಬರುತ್ತದೆ.[೩೪]

**ಅಡಿ ಟಿಪ್ಪಣಿಗಳು**

೦೧. ರಮೇಶ ಸ.ಚಿ., ೨೦೧೦, ಆಚರಣೆ : ದೇಶೀ ಜ್ಞಾನ ಪರಂಪರೆ. ಪುಟ.೮

೦೨. ವೀರೇಶ ಬಡಿಗೇರ, ೧೯೯೯, ಗುಳ್ಳವ್ವ ಆಚರಣೆ– ವಿಶ್ಲೇಷಣೆ, ಪುಟ.೧

೦೩. ಈಶ್ವರಪ್ಪ ಎಂ.ಜಿ., ಕೃಷಿ ಜಾನಪದ, ಪುಟ.೪೫

೦೪. ಅದೇ, ಪುಟ.೪೬

೦೫. ಅದೇ, ಪುಟ.೪೭–೪೮

೦೬. ಗಿರಿಜ ಟಿ., ೨೦೦೧, ದಾವಣಗೆರೆ ಇದು ನಮ್ಮ ಜಿಲ್ಲೆ. ಪುಟ.೩೪೦

೦೭. ಅದೇ, ಪುಟ.೩೫೨

೦೮. ಅದೇ, ಪುಟ.೩೩೫

೦೯. ಅದೇ, ಪುಟ.೩೩೬

೧೦. ಈಶ್ವರಪ್ಪ ಎಂ.ಜಿ., ೧೯೯೨, ದವನಸಿರಿ, ಪುಟ.೬೦

೧೧. ಸದಾಶಿವಪ್ಪ ಬಿ.ಎಂ., ೨೦೧೦, ದಾವಣಗೆರೆ ಜಿಲ್ಲೆ ಒಂದು ಪಕ್ಷಿನೋಟ, ೫೮–೫೯

೧೨. ದಾಸೇಗೌಡ ಜಿ.ವಿ., ನಮ್ಮ ಜನಪದ ನಂಬಿಕೆಗಳು, ಪುಟ.೭.

೧೩. ಅದೇ ಪುಟ.೭–೮

೧೪. ಮಂಜುನಾಥ ಬೇವಿನಕಟ್ಟೆ, ಕನ್ನಡ ಜನಪದ ನಂಬಿಕೆಗಳು, ಪುಟ.೩೫

೧೫. ಜವರೆಗೌಡ ದೇ., ಜಾನಪದ ಅಧ್ಯಯನ ಪುಟ.೩೩೫

೧೬. ಅದೇ, ಪುಟ.೩೩೬

೧೭. ಅದೇ, ಪುಟ.೩೩೯

೧೮. ಬಸವರಾಜಯ್ಯ ಎಂ.ಸಿರುಗಪ್ಪ, ಮೊಹರಂ ಭಾವೈಕ್ಯತೆ ಬೇಸುಗೆ, ಪ್ರಜಾವಾಣಿ, ಕರ್ನಾಟಕ ದರ್ಶನ, ಮಂಗಳೂರು ೧೭, ನವೆಂಬರ್ ಪುಟ.೧

೧೯. ಅದೇ, ಪುಟ.೧

೨೦. ತಿಪಟೂರು ವಿಶ್ವನಾಥ್., ಹಬ್ಬಗಳು ಮತ್ತು ದಿನಾಚರಣೆಗಳು, ಪುಟ.೧೩

೨೧. ಅದೇ, ಪುಟ.೧೭–೧೮

೨೨. ಮಂಜುನಾಥ ಬೇವಿನಕಟ್ಟೆ, ಕನ್ನಡ ಜನಪದ ನಂಬಿಕೆಗಳು, ಪುಟ.೯೮–೯೯

೨೩. ಅದೇ, ಪುಟ.೧೦೧

೨೪. ಹಿರೇಮಠ ಎಸ್.ಬಿ., ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ–೨, ಪುಟ.೪೧–೪೨

೨೫. ಅದೇ ಪುಟ.೪೩–೪೪

೨೬. ಅದೇ ಪುಟ.೫೩

೨೭. ರಮೇಶ ಸ.ಚಿ., ಆಚರಣೆ : ದೇಶಿ ಜ್ಞಾನ ಪರಂಪರೆ, ಜಾನಪದ ಕರ್ನಾಟಕ, ಪುಟ.೮

೨೮. ಅದೇ, ಪುಟ.೯-೧೦

೨೯. ರಂಗಸ್ವಾಮಿ ಡಿ.ಟಿ. ಭಾರತದ ಹಬ್ಬಗಳು, ಪುಟ.೭೯-೮೦

೩೦. ಅದೇ, ಪುಟ.೮೧

೩೧. ಅದೇ, ಪುಟ.೮೩

೩೨. ಬರುಡೇಕಟ್ಟೆ ಮಂಜಪ್ಪ, ೨೦೧೩, ಬಾತಿಯ ಬೆಳಗು, ಪುಟ.೫೩

೩೩. ಅದೇ, ಪುಟ.೫೪

೩೪. ಅದೇ, ಪುಟ.೫೫

೩೫. ಚಂದ್ರಬಾಬು ವೈ, ಮುಳಬಾಗಿಲು, ಜನಪದ ಕಾವಡಿ ಹಬ್ಬಗಳು ; ಸಾಂಸ್ಕೃತಿಕ ಅಧ್ಯಯನ ಪುಟ. ೧೯

೩೬. ಅದೇ, ಪುಟ.೨೦-೨೧

೩೭. ಗಿರಿಜಾ ಟಿ., ಪೂರ್ವೋಕ್ತ, ಪುಟ.೩೧೧

***

# ಸಮಾರೋಪ

ಕರ್ನಾಟಕದ ಹೃದಯಭಾಗವಾದ ದಾವಣಗೆರೆ ಪರಿಸರ ಪ್ರಾಗಿತಿಹಾಸ ಕಾಲದಿಂದ ಮಾನವನ ವಾಸಸ್ಥಾನವಾಗಿ, ನಾಗರೀಕತೆಯಾಗುತ್ತ ಮುಖ ಮಾಡಿದೆ. ಸಂಸ್ಕೃತಿಯ ಶ್ರೀಮಂತ ಕುರುಹುಗಳನ್ನು ಹೊಂದಿರುವ ಈ ಪ್ರದೇಶದಲ್ಲಿ 'ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ. ಯಾವುದೇ ಒಂದು ಪ್ರದೇಶದ ಚರಿತ್ರೆಯನ್ನು ತಿಳಿಯಬೇಕಾದರೆ ತಳ ಮಟ್ಟದಲ್ಲಿ ಅಧ್ಯಯನ ಕೈಗೊಳ್ಳುವುದು ಇಂದಿನ ಬದಲಾದ ಚರಿತ್ರೆಯ ಆಯಾಮುಗಳಲ್ಲಿ ಅವಶ್ಯಕವಾಗಿದೆ. ಹೀಗಾಗಿ ಈ ಪ್ರದೇಶವನ್ನು ಪ್ರಾದೇಶಿಕವಾಗಿ ವಿಭಾಗಿಸಿಕೊಂಡು ಅಧ್ಯಯನ ಕೈಗೊಂಡರೆ ಆಯಾ ಜಿಲ್ಲೆ, ತಾಲ್ಲೂಕು, ಹೋಬಳಿಯಲ್ಲಿರುವ ಪ್ರಾಚೀನ ನೆಲೆಗಳು, ಶಾಸನ, ದೇವಾಲಯ ಕುರಿತು ಮೂರ್ತಿ ಶಿಲ್ಪ, ವೀರಗಲ್ಲುಗಳು, ಕೆರೆ–ಕಟ್ಟೆ, ಬಾವಿಗಳು ಮುಂತಾದ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ತಿಳಿಸಲಾಗಿದೆ. ಪ್ರಾದೇಶಿಕ ಅಧ್ಯಯನದಿಂದ ನಾಡಿನ ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಿಟ್ಟು ಹೋಗಿರುವ ಕೆಲವು ಮಹತ್ವದ ವಿಷಯಗಳನ್ನು ಜೋಡಿಸಲು ಸಾಧ್ಯವಾಗುತ್ತದೆ. ಪ್ರಸ್ತುತ ದಿನಗಳಲ್ಲಿ ಇತಿಹಾಸ ಅಧ್ಯಯನದ ಕ್ಷೇತ್ರ ವಿಶಾಲವಾದ ರೂಪವನ್ನು ಪಡೆದಿರುವುದರಿಂದ ಸ್ಥಳೀಯ ಇತಿಹಾಸದ ಅಧ್ಯಯನದ ಕಡೆಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ.

ದಾವಣಗೆರೆ ಕಸಬಾ ಪರಿಸರವು ಭೌಗೋಳಿಕವಾಗಿ ಸಮೃದ್ಧಿಯಿಂದ ಕೂಡಿದ್ದು, ಪ್ರಾಚೀನ ಕಾಲದ ಪ್ರದೇಶಗಳಾದ ಎಲೇಬೇತೂರು, ಆನೆಗೊಂಡ, ಶಾಮನೂರು, ಹಳೇ ಕುಂದುವಾಡ, ಬಾತಿ, ಕಾಡ್ಲೆಬಾಳು, ಸ್ಥಳಗಳಲ್ಲಿ ಮೌರ್ಯರು ಶಾತವಾಹನರು, ಚಾಲುಕ್ಯರು, ಹೊಯ್ಸಳರು, ಉಚ್ಚಂಗಿಪಾಂಡ್ಯರು ವಿಜಯನಗರದ ಅರಸರು, ಪಾಳೆಯಗಾರರು, ಮೈಸೂರು ಒಡೆಯರು ಹಾಗೂ ಸ್ಥಳೀಯ ಪಾಳೆಯಗಾರರು ಆಳ್ವಿಕೆ ಮಾಡಿರುವುದು ಸ್ಪಷ್ಟವಾಗುತ್ತದೆ. ಅದೇ ರೀತಿ ದಾವಣಗೆರೆ ಕಸಬಾ ಪರಿಸರದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡಿದ್ದು ಧಾರ್ಮಿಕ ಸಹಿಷ್ಣುತೆಗೆ ಕಾರಣವಾಗಿದೆ. ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಜೈನ ಬಸದಿಗಳು ಮತ್ತು ಶಾಕ್ತ ದೇವಾಲಯಗಳು ನಿರ್ಮಾಣಗೊಂಡಿದ್ದು, ಅವುಗಳು ಧಾರ್ಮಿಕ ಕೇಂದ್ರವಾಗಿ ಹೊರಹೊಮ್ಮಿವೆ. ಇಲ್ಲಿನ ರಾಜಮನೆತನಗಳು ಈ ಪ್ರದೇಶದಲ್ಲಿರುವ ದೇವಾಲಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿರುವುದು ಇಲ್ಲಿನ ಶಾಸನಗಳಿಂದ ತಿಳಿದು ಬಂದಿದೆ.

ದಾವಣಗೆರೆ ಕಸಬಾ ಪರಿಸರದಲ್ಲಿ ಶೈವ ಮತ್ತು ವೈಷ್ಣವ ಧರ್ಮದ ಪ್ರಾಬಲ್ಯವಿದ್ದು, ಜೈನ ಬಸದಿಗಳು ಇದ್ದರೂ ನಶಸಿ ಹೋಗುತ್ತಿವೆ. ಅವುಗಳಲ್ಲಿ ಇಲ್ಲಿನ ಕೆಲವು ದೇವಾಲಯಗಳು ಜೀರ್ಣೋದ್ಧಾರಗೊಂಡಿದ್ದು ಉತ್ತಮ ಸ್ಥಿತಿಯಲ್ಲಿವೆ. ಇನ್ನೂ ಕೆಲವು ದೇವಾಲಯಗಳಾದ ಎಲೆ ಬೇತೂರಿನ ಕಲ್ಲೇಶ್ವರ ದೇವಾಲಯ, ಆನೆಕೊಂಡದ ಈಶ್ವರ ದೇವಾಲಯ, ಹಳೇ ಕುಂದವಾಡ ಸೋಮನಾಥೇಶ್ವರ ದೇವಾಲಯ ನಶಿಸುತ್ತಿದ್ದು ಸೂಕ್ತ ರಕ್ಷಣೆ ಮಾಡಬೇಕಾಗಿದೆ. ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ರಾಜಕೀಯ ಅಂಶಗಳು ಮಾತ್ರವಲ್ಲದೆ ಅಂದಿನ ಕಾಲದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ವಿವರಗಳು ಶಾಸನಗಳಲ್ಲಿ ದಾಖಲೆಯಾಗಿವೆ. ಅಂದಿನ ಸಮಾಜದಲ್ಲಿ ಆಳುವ ವರ್ಗ ಮತ್ತು ಶ್ರಮಿಕ ವರ್ಗವೆಂಬ ವರ್ಗೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರಮಿಕ ವರ್ಗ ತುಂಬಾ ಶ್ರಮ ಜೀವಿಗಳಾಗಿದ್ದರಿಂದ ಕಾಲ –ಕಾಲಕ್ಕೆ ಈ ಪ್ರದೇಶ ಸಾಂಸ್ಕೃತಿಕವಾಗಿ ಶ್ರೀಮಂತವಾಗುತ್ತಾ ಬಂದಿದೆ.

ಪ್ರಭುವರ್ಗ ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿತ್ತು. ಬ್ರಾಹ್ಮಣರು ತಮ್ಮನ್ನು ಉನ್ನತ ಸ್ಥಾನದಲ್ಲಿಟ್ಟಕೊಂಡು ಸಾಮಾಜಿಕ ವ್ಯವಸ್ಥೆಯನ್ನು ರೂಪಿಸುತ್ತಿದ್ದರು. ಹಾಗೂ ಸಮಾಜದಲ್ಲಿ ಕೀಳು ಎಂದು ಪರಿಗಣಿಸಲ್ಪಟ್ಟ ಕೆಳವರ್ಗದ ಜನರ ಜೀವನ ಕಷ್ಟಕರವಾಗಿತ್ತು. ಸ್ತ್ರೀಯರು ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಹೊಂದಿದ್ದರು. ಶಿಕ್ಷಣವು ಅಂದಿನ ಪೀಳಿಗೆಗೆ ದೇವಾಲಯ, ಅಗ್ರಹಾರ, ಮಠಗಳು, ಘಟಿಕಸ್ಥಾನ, ಬ್ರಹ್ಮಪುರಿಗಳಲ್ಲಿ ಸ್ಥಾನಾಚಾರ್ಯರು, ಮಹಾಜನರ ಮೂಲಕ ವಿದ್ಯಾದಾನವನ್ನು ನಡೆಸಿಕೊಂಡು ಬರುತ್ತಿದ್ದರು. ದಾವಣಗೆರೆ ಕಸಬಾ ಪರಿಸರವು ಶ್ರೀಮಂತವಾಗಿದ್ದುದರಿಂದ ಈ ಪ್ರದೇಶ ಅಂದಿನ ಕಾಲಾವಧಿಯಲ್ಲಿ ಆನೇಕ ವಿದ್ಯಾ–ಕೇಂದ್ರಗಳಲ್ಲಿ ಒಂದಾಗಿತ್ತು. ಇದಕ್ಕೆ ಅಧಿಕಾರಿಗಳು ಮತ್ತು ಸ್ಥಳೀಯ ಜನರ ಪ್ರೋತ್ಸಾಹ ಹಾಗೂ ಆರ್ಥಿಕವಾಗಿ ಈ ಪ್ರದೇಶವು ಸಾಕಷ್ಟು ಉತ್ತಮವಾಗಿತ್ತು ಎಂದು ಹೇಳಬಹುದು.

ಒಂದು ಪರಿಸರದಲ್ಲಿ ಅಸ್ತಿತ್ವದಲ್ಲಿದ್ದ ನಂಬಿಕೆ ಆಚರಣೆಗಳು ಆ ಪರಿಸರದ ಸಾಂಸ್ಕೃತಿಕ ಮಹತ್ವ ತಿಳಿಸುತ್ತದೆ. ಅವುಗಳು ಆ ಪರಿಸರದ ಮಾನವನ ಜೀವನದಲ್ಲಿ ಹಾಸುಹೊಕ್ಕಗಿದ್ದು, ಸಂಸ್ಕೃತಿಯ ಬೆಳಕನ್ನು ಬೀರಿ ಸಂಸ್ಕೃತಿಗೆ ಸಂಬಂಧಿಸಿದ ಮೌಖಿಕ ಪುರಾವೆಗಳನ್ನು ಒದಗಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಪ್ರತಿಯೊಂದು ಪರಿಸರದಲ್ಲಿ ಜಾತ್ರೆಗಳು, ಹಬ್ಬಗಳು ಉತ್ಸವಗಳು, ಐತಿಹ್ಯಗಳು, ನಂಬಿಕೆಗಳು ಇವೆಲ್ಲವುಗಳನ್ನು ಆಚರಿಸಿಕೊಂಡು ಬಂದ ಜನರು ಹಿಂದಿನಿಂದಲೂ ನಂಬಿಕೊಂಡು ಬಂದಿರುವ ಆಚರಣೆಗಳು ಆ ಪರಿಸರಕ್ಕೆ ಮತ್ತು ಜನರಿಗೆ ಒಳಿತಾಗುತ್ತದೆ ಎನ್ನುವ ನಂಬಿಕೆಗಳು ಎಲ್ಲಾ ಜನರಲ್ಲಿವೆ. ಪ್ರಸ್ತುತ ನನ್ನ ಅಧ್ಯಯನ ಪ್ರದೇಶದಲ್ಲಿ ನಂಬಿಕೆ ಆಚರಣೆಗಳಡಿಯಲ್ಲಿ ಜಾತಿ, ಹಬ್ಬ, ಉತ್ಸವ ಮುಂತಾದವುಗಳನ್ನು ಆಚರಿಸುತ್ತಾರೆ. ಅವುಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯ ಕೈಗೊಂಡು ಆ ಪರಿಸರವನ್ನಾ ಕುರಿತು ವಿವರಿಸುವ ಸಾಹಿತ್ಯಾ

ಗ್ರಂಥಗಳನ್ನು ಅವಲೋಕಿಸಿ ಅವುಗಳಲ್ಲಿ ನೀಡಿರುವ ಪ್ರಮುಖ ಅಂಶಗಳನ್ನು ಸಂಗ್ರಹಿಸಿ, ನೈಜ ಸ್ಥಿತಿಯನ್ನು ಅಧ್ಯಯನ ನಡೆಸಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ಫಲಿತಾಂಶಗಳು ಅಧ್ಯಯನ ಸಂದರ್ಭದಲ್ಲಿ ಕಂಡು ಬಂದಿವೆ. ಆ ಹಿನ್ನೆಲೆಯಲ್ಲಿ ಇಲ್ಲಿನ ಶಾಸನಗಳು, ದೇವಾಲಯಗಳನ್ನು ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಪರಿಸರದ ಸಾಂಸ್ಕೃತಿಕ ಮಹತ್ವವನ್ನು ಮರೆತು ಹೋಗಿರುವ ಚಾರಿತ್ರಿಕ ವಿಷಯಗಳನ್ನು ಪುನರ್ ಪರಿಶೀಲಿಸಿ, ಈ ಪ್ರದೇಶದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಹಾಗೂ ಸ್ಥಳೀಯ ಚರಿತ್ರೆಯ ಮಹತ್ವವನ್ನು ತಿಳಿಸುವ ಪ್ರಯತ್ನವನ್ನು ಸಂಪ್ರಬಂದದಲ್ಲಿ ಮಾಡಲಾಗಿದೆ.

ದಾವಣಗೆರೆ ಕಸಬಾ ಪ್ರದೇಶದಲ್ಲಿ ಕೆಲವು ಬೃಹತ್ ಶಿಲಾಯುಗದ ಕುಳಿ ಸಮಾಧಿಗಳು ದೊರೆತಿವೆ. ಈ ಹಿನ್ನೆಲೆಯಲ್ಲಿ ಬೃಹತ್ ಶಿಲಾಯುಗದ ನಂಬಿಕೆ ಮತ್ತು ಆಚರಣೆಗಳು ಇಲ್ಲಿ ಜೀವಂತವಾಗಿ ಕಂಡು ಬರುವುದಿಲ್ಲ. ಬೃಹತ್ ಶಿಲಾಯುಗದ ಸಮುದಾಯಗಳು ಕ್ರಮೇಣ ಪರೋಕ್ಷವಾಗಿ ಲಿಖಿತ ಸಂಸ್ಕೃತಿಯ ಸಮುದಾಯಗಳಾಗಿ ಬದಲಾವಣೆಗೊಂಡಿದ್ದು ಮೌರ್ಯರ ಆಡಳಿತದ ಒಂದು ಪ್ರಮುಖ ಅಂಶವಾಗಿದೆ. ಏಕೆಂದರೆ ದಾವಣಗೆರೆ ಸಮೀಪದ ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮಗಿರಿ ಪರಿಸರದ ಇತಿಹಾಸವು ಮೌರ್ಯರ ಆಳ್ವಿಕೆಯಿಂದಲೇ ಆರಂಭವಾಗುವುದು ಹಾಗಾಗಿ ಹಿಂದೆ ದಾವಣಗೆರೆಯು ಚಿತ್ರದುರ್ಗದ ಒಂದು ಭಾಗವಾಗಿದ್ದರಿಂದ ಮೌರ್ಯರ ಆಳ್ವಿಕೆಯ ಕುರುಹುಗಳನ್ನು ಹೊಂದಿರುವ ದಾವಣಗೆರೆ ಕಸಬಾ ಪರಿಸರವು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ.

ಈ ಪರಿಸರದಲ್ಲಿ ಚಾರಿತ್ರಿಕ ಕಾಲಘಟ್ಟದಲ್ಲಿ ಶಾತವಾಹನರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ನೊಳಂಬರು, ಹೊಯ್ಸಳರು, ಉಚ್ಚಂಗಿ ಪಾಂಡ್ಯರು, ವಿಜಯನಗರ, ಅರಸರು, ಚಿತ್ರದುರ್ಗ, ಪಾಳೆಯಗಾರರು, ಮೈಸೂರು ಒಡೆಯರು ಹಾಗೂ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿರುವುದನ್ನು ಗುರುತಿಸಲಾಗಿದೆ. ಹೊಯ್ಸಳರು ಮತ್ತು ವಿಜಯನಗರ ಸಾಮ್ರಾಜ್ಯ ಕಾಲದ ಅರಸರ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯ ಪ್ರಭಾವ ಈ ಪರಿಸರದಲ್ಲಿ ಹೆಚ್ಚಾಗಿರುವುದು ಗಮನಿಸಬೇಕಾದ ಅಂಶವಾಗಿದೆ. ಇವರ ಕಾಲದ ದೇವಾಲಯಗಳು, ಶಾಸನಗಳು. ಕೆರೆ – ಕಟ್ಟೆಗಳಂತಹ ಐತಿಹಾಸಿಕ ಕುರುಹುಗಳು ಇಂದಿಗೂ ದಾವಣಗೆರೆ ಕಸಬಾ ಪರಿಸರದಲ್ಲಿ ಅವರ ಕಾಲವಧಿಯ ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ಬದಲಾವಣೆಯನ್ನು ವಿವರಿಸುತ್ತವೆ. ವಿಜಯನಗರೋತ್ತರ ಕಾಲಘಟ್ಟದಲ್ಲಿ ದಾವಣಗೆರೆ ಕಸಬಾ ಪರಿಸರದಲ್ಲಿ ಚಿತ್ರದುರ್ಗ ಮತ್ತು ಸಣ್ಣಪುಟ್ಟ ಪಾಳೆಯಗಾರರು ಆಳ್ವಿಕೆಯ ಪ್ರಮುಖವಾದದು.

ದಾವಣಗೆರೆ ಕಸಬಾ ಪರಿಸರದ ದೇವಾಲಯಗಳು ಅಂದಿನ ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುವ ಬಹುಮುಖ್ಯ ಆಕರಗಳು ಇವು ಕೇವಲ ಧಾರ್ಮಿಕ ಕೇಂದ್ರಗಳಾಗಿ ಉಳಿಯದೇ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸುವ ಸಂಸ್ಥೆಗಳಂತೆ ಕಾರ್ಯ ನಿರ್ವಹಿಸುತ್ತಿದ್ದವು. ಈ ದೇವಾಲಯಗಳು ವಿವಿಧ ಕಾಲಘಟ್ಟಕ್ಕೆ ಸೇರಿದ ವಿಭಿನ್ನ ರಾಜಮನೆತನಗಳ ಆಳ್ವಿಕೆಯ ಧಾರ್ಮಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗಳನ್ನು ಮೌನವಾಗಿಯೇ ವಿವರಿಸುತ್ತವೆ, ದಾವಣಗೆರೆ ಪ್ರದೇಶದಲ್ಲಿ ಹಲವು ರಾಜಮನೆತನಗಳು ಆಳ್ವಿಕೆ ನಡೆಸಿದ್ದವೆಂಬುದಕ್ಕೆ ಪುರಾವೆಗಳು ದೊರೆತರೂ ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಹಾಗೂ ಕಲ್ಯಾಣ ಚಾಲ್ಯುಕರ ಕಾಲಘಟ್ಟದಲ್ಲಿ ದೇವಾಲಯಗಳು ಹೆಚ್ಚು ನಿರ್ಮಾಣಗೊಂಡಿವೆ, ಇವೆಲ್ಲವೂ ಶೈವ, ವೈಷ್ಣವ, ಜೈನ, ಬೌದ್ಧ, ಧರ್ಮಕ್ಕೆ ಸಂಬಂಧಿಸಿದ್ದರೂ ಅವುಗಳಲ್ಲಿ ಹೆಚ್ಚು ದೇವಾಲಯಗಳು ಶೈವ ದೇವಾಲಯಗಳೇ ಆಗಿವೆ. ದಾವಣಗೆರೆ ಕಸಬಾ ಪರಿಸರದಲ್ಲಿ ಹೆಚ್ಚು ಶೈವ ಧರ್ಮದ ಪ್ರಭಾವ ಕಂಡುಬಂದಿದ್ದು, ಆದರಿಂದಾಗಿ ಈ ಭಾಗದ ಪ್ರಮುಖ ಧರ್ಮವಾಗಿ ಗುರುತಿಸಿಕೊಂಡಿದೆ.

ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು ದಾವಣಗೆರೆ ಪರಿಸರದ ಐತಿಹಾಸಿಕ ಅಂಶಗಳನ್ನು ತಿಳಿಸುತ್ತದೆ. ಈ ಪರಿಸರದ ಐತಿಹಾಸಿಕ ಮಹತ್ವ ಮತ್ತು ಅದರ ಆರ್ಥಿಕ ಸಂಪತ್ತಿನ ಮೌಲ್ಯದ ಬಗ್ಗೆಯೂ ಇವು ಬೆಳಕು ಚೆಲ್ಲುತ್ತವೆ. ಈ ಪರಿಸರದ ಗ್ರಾಮಗಳಲ್ಲಿ ಹೆಚ್ಚು ವೀರಗಲ್ಲುಗಳು ಕಂಡು ಬರುತ್ತವೆ. ಇವು ವಿಜಯನಗರ ಮತ್ತು ವಿಜಯನಗರೋತ್ತರ ಕಾಲಘಟಕ್ಕೆ ಸೇರುತ್ತವೆ, ಹಾಗೆಯೇ ವೀರನ ಮರಣರ ನಂತರ ಆತನ ಪತ್ನಿಯು ಸತಿ ಹೋಗಿರುವುದರ ನೆನಪಿಗಾಗಿ ಹಾಕಲಾದ ಮಾಸ್ತಿಕಲ್ಲುಗಳು ಈ ಪ್ರದೇಶದಲ್ಲಿ ಕಂಡು ಬರುತ್ತವೆ. ಹಾಗೆಯೇ ಹೆಚ್ಚು ದಾನ ಶಾಸನಗಳನ್ನು ಈ ಪರಿಸರದಲ್ಲಿ ನೋಡಬಹುದಾಗಿದೆ. ಇವು ಅಂದಿನ ವೀರಪರಂಪರೆಯ ತ್ಯಾಗ-ಬಲಿದಾನದ ಸಂಕೇತಗಳಾಗಿವೆ. ಮುಕ್ತಿಯನ್ನು ಪಡೆಯುವ ಉದ್ದೇಶಕ್ಕಾಗಿ ಜೈನಮುನಿಗಳು ದೇಹವನ್ನು ದಂಡಿಸಿ ಸಲ್ಲೇಖನ ಎಂಬ ವ್ರತದಿಂದ ಪ್ರಾಣತ್ಯಾಗ ಮಾಡಿದ ಜ್ಞಾಪಕರ್ಥವಾಗಿ ಕಡೆದ ನಿಷಿಧಿಕಲ್ಲುಗಳು ಹಾಗೂ ಅವರ ಆರಾಧನ ಕೇಂದ್ರಗಳು ಜಿನಾಲಯಗಳನ್ನು ದಾವಣಗೆರೆ ಕಸಬಾ ಪರಿಸರದಲ್ಲಿ ಕಾಣಬಹುದು. ಈ ಪರಿಸರದಲ್ಲಿ ಶಾಮನೂರು ಮತ್ತು ಎಲೇ ಬೇತೂರು ಗ್ರಾಮಗಳಲ್ಲಿ ಸಿಗುವ ಜೈನ ಶಿಲ್ಪಗಳಿಂದ ದಾವಣಗೆರೆಯು ಜೈನರ ಪ್ರಾಚೀನ ಕೇಂದ್ರವಾಗಿದ್ದುದು ಸ್ಪಷ್ಟವಾಗುತ್ತದೆ.

ದಾವಣಗೆರೆ ಕಸಬಾ ಪ್ರದೇಶದಲ್ಲಿ ಕಂಡು ಬರುವ ಐತಿಹ್ಯ, ನಂಬಿಕೆ. ಆಚರಣೆ ಹಾಗೂ ಜಾತ್ರೆ, ಉತ್ಸವಗಳು ವಿಶಿಷ್ಟ ಸಾಂಸ್ಕೃತಿಕ ಪರಂಪರೆಯ ಇತಿಹಾಸವನ್ನು ಒಳಗೊಂಡಿವೆ. ಈ ಪರಿಸರ ಜಾತ್ರೆಯಲ್ಲಿ ಕಂಡು ಬರುವ ಅಂಶವೆಂದರೆ ಇಲ್ಲಿನ ಬಹುತೇಕ ಜಾತ್ರೆಗಳು ಸಮಕಾಲೀನ ಅಥವಾ ಐತಿಹಾಸಿಕ ವ್ಯಕ್ತಿಗಳ ಸಂಬಂಧವಾಗಿ ಹುಟ್ಟಿಕೊಂಡಿವೆ ಎಂಬುದು ಪ್ರಮುಖ

ಅಂಶವಾಗಿದೆ. ನಿಸರ್ಗದ ಶಕ್ತಿಯಿಂದ ಪಾರಾಗಲು ಹಾಗೂ ಶಮನ ಮಾಡುವ ಉದ್ದೇಶದಿಂದ ಜನತೆಯ ನಂಬಿಕೆ ಆಚರಣೆಗಳನ್ನು ಮಾಡುತ್ತಾ ಬಂದಿರುವುದನ್ನು ನೋಡಬಹುದಾಗಿದೆ. ಮಾನವನ ಬದುಕನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಬೆಳೆಸುವಲ್ಲಿ, ಪ್ರತಿಯೊಂದು ಪರಿಸರದ ಆಚರಣೆಗಳು ಮಹತ್ವದ ಪಾತ್ರವಹಿಸುತ್ತವೆ. ಆಚರಣೆಗಳಲ್ಲಿ ಪ್ರಾಣಿ, ಪಕ್ಷಿ, ಪ್ರಾಕೃತಿಕ ವಸ್ತುಗಳನ್ನು ಪೂಜಿಸುವುದನ್ನು ಇಂದಿಗೂ ಕಾಣಬಹುದಾಗಿದೆ. ನೆಲ, ಜಲ, ಅಗ್ನಿ, ವಾಯು, ಮತ್ತು ಆಕಾಶವನ್ನು ಪೂಜಿಸದ ಆಚರಣೆಗಳಿಲ್ಲ ಕಾಲ ಕಾಲಕ್ಕೆ ಅಗತ್ಯವಿರುವ ವಸ್ತು-ವಿಚಾರಗಳ ಬಗ್ಗೆ ಮಾನವರು ಗಮನ ಹರಿಸುವಂತೆ ಹಬ್ಬಗಳು, ಜಾತ್ರೆಗಳು, ಉತ್ಸವಗಳು ಜನರಲ್ಲಿ ಒಳ್ಳೆಯ ಭಾವನೆ ಮೂಡಿಸುತ್ತದೆ ಎಂದು ಹೇಳಬಹುದಾಗಿದೆ.

ಒಟ್ಟಾರೆಯಾಗಿ ಈ ಸಂಪ್ರಬಂದವು ದಾವಣಗೆರೆ ಕಸಬಾ ಪರಿಸರದ ಸಾಂಸ್ಕೃತಿಕ ಇತಿಹಾಸವನ್ನು ಒಳಗೊಂಡಿದ್ದು ಇನ್ನು ಈ ಪ್ರದೇಶದ ಹೆಚ್ಚಿನ ಸಂಶೋಧನೆ ನಡೆಸಿದಾರೆ ಬಹುಮುಖ್ಯವಾದ ಅಂಶಗಳನ್ನು ಬೆಳಕಿಗೆ ತರುವ ಸಾದ್ಯತೆ ಇದೆ.

***

## ಪರಾಮರ್ಶನ ಗ್ರಂಥಗಳು

### ಕನ್ನಡ ಗ್ರಂಥಗಳು


೦೧. ಅಣ್ಣಿಗೇರಿ ಎ.ಎಂ., (ಸಂ), ೧೯೭೫, **ಕರ್ನಾಟಕ ಶಾಸನಗಳ ಸ್ವರೂಪ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೦೨. ಅಪರ್ಣ ಕೂ. ಸು., ೧೯೯೯, **ದೇವಾಲಯ ವಾಸ್ತು ಶಿಲ್ಪ ಪರಿಚಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೩. ಈಶ್ವರಪ್ಪ ಎಂ.ಜಿ., (ಸಂ), ೧೯೯೨, **ದವನಸಿರಿ**, ಅಖಿಲ ಭಾರತ ೬೧ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ದಾವಣಗೆರೆ.

೦೪. ಈಶ್ವರಪ್ಪ ಎಂ.ಜಿ., (ಸಂ). ೨೦೦೦, **ಶತಮಾನದ ದಾವಣಗೆರೆ**, ಚಂಪಲಾಲ್. ಬಿ ಡೆಲ್ಹಿರಿಯಾ ಎಸ್ಎಸ್, ಲೇಔಟ್ ದಾವಣಗೆರೆ.

೦೫. ಕಲಬುರ್ಗಿ ಎಂ.ಎಂ., ೧೯೯೯, **ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು**, (ಸಂ.೧), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೬. ಕಲಬುರ್ಗಿ ಎಂ.ಎಂ., ೧೯೯೪, **ಕರ್ನಾಟಕದ ಕೈಪಿಯತ್ತುಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೭. ಕುಲಕರ್ಣಿ, ೨೦೦೧, **ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ)

೦೮. ಕೋಟ್ರೇಶ್ ಎಂ., ೧೯೯೬, **ಉಚ್ಚಂಗಿದುರ್ಗ**, (ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೯. ಗಿರಿಜಾ ಟಿ., ೨೦೦೧, **ಇದು ನಮ್ಮ ಜಿಲ್ಲೆ ದಾವಣಗೆರೆ**, ನಿಹಾರಿಕ ಪ್ರಕಾಶನ, ದಾವಣಗೆರೆ.

೧೦. ಗಿರಿಜಾ ಟಿ., ೨೦೦೧, **ದಾವಣಗೆರೆ ಜಿಲ್ಲಾ ದರ್ಶನಿ**, ನಿಹಾರಿಕಾ ಪ್ರಕಾಶನ, ದಾವಣಗೆರೆ

೧೧. ಗಿರಿಜಾ ಟಿ., ೨೦೦೦, **ದಾವಣಗೆರೆ ಸ್ಥಳನಾಮದ ಬಗ್ಗೆ ಒಂದು ಸಮೀಕ್ಷೆ**, ಇತಿಹಾಸ ದರ್ಶನ. ನಿಹಾರಿಕಾ ಪ್ರಕಾಶನ, ದಾವಣಗೆರೆ.

೧೨. ಚನ್ನಬಸವಯ್ಯ ಹಿರೇಮಠ., ೨೦೧೪, ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ. ಹಂಪಿ

೧೨. ಚಿದಾನಂದಮೂರ್ತಿ ಎಂ., ೧೯೯೬. **ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೧೩. ಜವರೇಗೌಡ ದೇ., ೧೯೮೦, **ಸ್ಥಳನಾಮದ ವ್ಯಾಸಾಂಗ**, ಸಹ್ಯಾದ್ರಿ ಪ್ರಕಾಶನ, ಮೈಸೂರು.

೧೪. ತಿಪ್ಪೇರುದ್ರಸ್ವಾಮಿ ಹೆಚ್, ೧೯೮೫, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು.

೧೫. ದೇವರಾಜ್ ಎಸ್., ೨೦೧೨ **ಕರ್ನಾಟಕದ ಪ್ರವಾಸಿ ತಾಣಗಳು** ಆೃಡ್ ಪ್ರಿಂಟ್ಸ್ ಅಂಡ್ ಪ್ರಕಾಶನ, ಬೆಂಗಳೂರು.

೧೬. ನಾಗೇಶ್, (ಸಂ), ೨೦೧೧, **ನಮ್ಮ ಕರ್ನಾಟಕ**, ಸೃಷ್ಟಿ ಪ್ರಕಾಶನ, ಬೆಂಗಳೂರು.

೧೭. ನಾಯಕ ಹಾ ಮಾ, (ಸಂ), ೨೦೦೯, **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೮. ನಾರಾಯಣ ಆರ್.ಪಿ., ೨೦೧೧, **ಕರ್ನಾಟಕದ ಜಿಲ್ಲೆಗಳು**, ಸಚಿನ್ ಪ್ರಕಾಶನ, ಹಂಪಿ ನಗರ ಬೆಂಗಳೂರು.

೧೯. ಪಂಚಮುಖಿ ಆರ್.ಎಸ್., **ಕರ್ನಾಟಕ ಅರಸು ಮನೆತನಗಳು**, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ ಧಾರವಾಡ.

೨೦. ಫ್ರಾನ್ಸಿಸ್ ಬುಕಾನಾನ್., ೧೯೮೮, **ಎ ಜರ್ನಿ ಫ್ರಮ್ ಮದ್ರಾಸ್ ಕಂಟ್ರಿಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ್**, ಸಂಪುಟ ೧, ಎಷ್ಯನ್ ಎಜುಕೇಶನ್ ಸರ್ವೀಸ್ ನ್ಯೂಡೆಲ್ಲಿ.

೨೧. ಬಸವರಾಜು ಕುಂಚೂರು, ೨೦೦೯, **ನಮ್ಮೂರ ಕೆರೆಗಳು**, ಶ್ರೀಚಕ್ರ ಪ್ರಕಾಶನ, ಕುಂಚೂರು.

೨೨. ರೈಸ್ ಬಿ.ಎಲ್., ೧೯೦೩, **ಎಪಿಗ್ರಾಫಿಯಾ ಆಫ್ ಕರ್ನಾಟಕ**, ಸಂಪುಟ ೧೧, ಚಿತ್ರದುರ್ಗ ಪಬ್ಲಿಕೇಶನ್ ಗೌರ್ನಮೆಂಟ್ ಆಫ್ ಮೈಸೂರು.

೨೩. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ವೆಂಕಟರಾಮಪ್ಪ ಕೆ.ಎನ್., ಮತ್ತು ಲಕ್ಷ್ಮೀನಾರಾಯಣ್ ಕೆ., ೧೯೭೯, **ದಾವಣಗೆರೆ ನಗರದ ಪ್ರಾಕೃತಿಕ ಪರಿಸರ**, ಮಾನವಿಕ ಕರ್ನಾಟಕ ಸಂ–೪, ಮೈಸೂರು ವಿಶ್ವವಿದ್ಯಾಲಯ.

೨೫. ಶಿವತಾರಕ್ ಕೆ.ಬಿ., ೨೦೦೧, **ಕರ್ನಾಟಕದ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಸುಮತೀಂದ್ರ ನಾಡಿಗ್. ೨೦೧೦. **ದಾವಣಗೆರೆ ಜಿಲ್ಲೆಯ ಕೆಲವು ಹೆಜ್ಜೆಗಳು**, ವಿಜಯ ಯುವಕರ ಸಂಘ, ಸಂತೇಬೆನ್ನೂರು.

೨೭. ಸೋಮಶೇಖರ ಎಸ್.ವೈ., ೨೦೧೦, **ಸ್ಥಳೀಯ ಚರಿತ್ರೆ ಪುರಾತತ್ವ ಮಾಲೆ**, ಜಗಳೂರು.

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಸದಾಶಿವಪ್ಪ ಶ್ಯಾಗಲೆ ಬಿ.ಎಂ., ೨೦೧೦, **ದಾವಣಗೆರೆ ಜಿಲ್ಲೆಯ ಒಂದು ಪಕ್ಷಿನೋಟ,** ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ದಾವಣಗೆರೆ.

೩೦. ಸುರೇಶ ಬಿ., ೨೦೦೯, **ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ದೇವಾಲಯಗಳು,** ಸಂಶೋಧನ ಪ್ರಕಾಶನ, ಚಳ್ಳಕೆರೆ.

೩೧. ಸೂರ್ಯನಾಥ ಯು ಕಾಮತ್. (ಸಂ), ೧೯೮೬, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** (ಭಾಗ=೩) ಗ್ಯಾಸೆಟಿಯರ್ ಇಲಾಖೆ ಬೆಂಗಳೂರು.


**ಪಿ.ಎಚ್‌ಡಿ ಮಹಾಪ್ರಬಂಧಗಳು**

೦೧. ಕುಮಾರ್ ಬಿ.ಪಿ., ೨೦೦೭, **ದಾವಣಗೆರೆ ಹತ್ತಿ ಕಾರ್ಮಿಕರ ಚಳುವಳಗಳು,** (ಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ.ಹಂಪಿ

೦೨. ಪಾಟೀಲ ಮಂಜುನಾಥ, ೨೦೦೨, **ದಾವಣಗೆರೆ ಜಿಲ್ಲೆಯ ಶಾಸನಗಳು ಒಂದು ಸಾಂಸ್ಕೃತಿಕ ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,

೦೩. ತಿಪ್ಪೇಸ್ವಾಮಿ ಎಚ್., ೨೦೦೦. **ದಾವಣಗೆರೆ ಜಿಲ್ಲೆಯ ದೇವಾಲಯಗಳು,** (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ.

೦೪. ಸುರೇಶ್ ಬಿ., **ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ಪುರಾತತ್ವ ಅಧ್ಯಯನ,** (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾಲಯ, ಮೈಸೂರು – ೨೦೦೨

೦೫. ಸಂತೋಷ್ ಎನ್.ಜಿ., **ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರದ ಮತ್ತು ನಾಯಕರ ಕಾಲದ ಕೃಷಿ ವ್ಯವಸ್ಥೆ,** (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ) ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ.


**ಎಂ.ಫಿಲ್ ಪ್ರಬಂಧಗಳು**

೦೧. ಆಂಜನೇಯಸ್ವಾಮಿ ಡಿ.ಕೆ., ೨೦೧೫, **ದಾವಣಗೆರೆ ಜಿಲ್ಲೆಯ ಪ್ರಾಚೀನ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ,** ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೨. ಐಶ್ವರ್ಯಮ್ಮ ಎಂ., ೨೦೧೫, **ದಾವಣಗೆರೆ ಜಿಲ್ಲೆಯ ಶಾಸನೋಕ್ತ ಮತ್ತು ಜನಪದ ಐತಿಹ್ಯಗಳು,** ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೩. ಕೊಟ್ರೇಶ್ ಎಂ., **ಉಚ್ಚಂಗಿದುರ್ಗ ಒಂದು ಅಧ್ಯಯನ**, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೪. ತಿಪ್ಪೇಸ್ವಾಮಿ ಟಿ., ೨೦೦೬, **ಚರಿತ್ರೆ ರಚನಶಾಸ್ತ್ರ : ದಾವಣಗೆರೆ ಜಿಲ್ಲೆಯನ್ನು ಕುರಿತು ಅಧ್ಯಯನಗಳ ಸಮೀಕ್ಷೆ**, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೫. ಮಹಲಿಂಗಪ್ಪ ಹೆಚ್., ೨೦೧೦, **ದಾವಣಗೆರೆ ಪ್ರದೇಶದ ರೈತ ಹೋರಾಟಗಳು**, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೬. ಹೊಳಿಬಸಪ್ಪ ಹಿರೇಬಿದ್ರಿ, ೨೦೦೫, **ದಾವಣಗೆರೆ ಜಿಲ್ಲೆಯ ಸ್ವದೇಶಿ ಚಳುವಳಿಗಳು**, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಗ್ಯಾಸೆಟಿಯರ್‌ಗಳು**

೦೧. ಸತ್ಯನ್ ಬಿ.ಎನ್., ೧೯೬೭, (ಸಂ), **ಗೆಜೆಟಿಯರ್ ಆಫ್ ಇಂಡಿಯಾ ಮೈಸೂರು ಸ್ಟೇಟ್**, ಚಿತ್ರದುರ್ಗ ಜಿಲ್ಲೆ.

೦೨. ಅಭಿಶಂಕರ್, ೧೯೬೭, (ಪ ಸಂ), **ಗೆಜೆಟಿಯರ್ ಆಫ್ ಇಂಡಿಯಾ ಮೈಸೂರು ಸ್ಟೇಟ್**, ತುಮಕೂರು ಜಿಲ್ಲೆ.

೦೩. ಸೂರ್ಯನಾಥ ಯು ಕಾಮತ್, ೧೯೮೩, (ಸಂ), **ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ-೩**.

೦೪. ನಾಗರಾಜ್ ಹೆ.ಎಸ್., ೧೯೮೮-೮೯, (ನಿರ್ದೇಶಕರು), **ಚಿತ್ರದುರ್ಗ ಜಿಲ್ಲೆಯ ಅಂಕಿ-ಅಂಶಗಳ ನೋಟ**.

**ಸ್ಮರಣ ಸಂಚಿಕೆಗಳು**

೦೧. ಗಿರಿಜಾ ಟಿ., ಶೋಭಾ ಹೆಚ್ ಜಿ., **ಕರ್ಪೂರ ರಾಜ್ಯಮಟ್ಟದ ೩ನೇ ಮಹಿಳಾ ಸಮಾವೇಶ**, ದಾವಣಗೆರೆ ಶ್ರೀ ತರಳುಬಾಳು ಸಿರಿಗೆರೆ, ಚಿತ್ರದುರ್ಗ ಜಿಲ್ಲೆ, ೨೦೦೨.

೦೨. **ತರಳಬಾಳು ಹುಣ್ಣಿಮೆ ಸ್ಮರಣ ಸಂಚಿಕೆ ೯೯**, ಪ್ರಧಾನ ಸಂಪಾದಕ ತಿಪ್ಪೇರುದ್ರಪ್ಪ. ಬಿ.

**ದಿನಪತ್ರಿಕೆಗಳು**

೦೧. ಕನ್ನಡಪ್ರಭ (೧೯-೦೨-೧೧೯೮೯)

೦೨. ಜನತಾಬಳಗ

೦೩. ನಗರವಾಣಿ

೦೪. ಪ್ರಜಾವಾಣಿ

೦೫. ವಿಜಯ ಕರ್ನಾಟಕ ೦೬.ವಿಜಯವಾಣಿ

## ದೇವಾಲಯಗಳ ಕೋಷ್ಟಕ

| ದೇವಾಲಯಗಳ ಹೆಸರು | ಸ್ಥಳ | ತಲವಿನ್ಯಾಸ | ವಾಸ್ತುಶೈಲಿ | ಕಾಲ | ಪಂಥ |
|---|---|---|---|---|---|
| ಈಶ್ವರ ದೇವಾಲಯ | ಆನೆಕೊಂಡ ಗ್ರಾಮದ ಮಧ್ಯಭಾಗದಲ್ಲಿದೆ. | ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. | ತ್ರಿಕೂಟ ಶೈಲಿಯಲ್ಲಿದೆ. | ಕ್ರಿ.ಶ. ೧೧-೧೩ನೇ ಶತಮಾನ | ಶೈವ |
| ಕಲ್ಲೇಶ್ವರ ದೇವಾಲಯ | ಅವರಗೊಳ್ಳ ಗ್ರಾಮದ ಮಧ್ಯಭಾಗದಲ್ಲಿದೆ. | ಗರ್ಭಗೃಹ, ಅಂತರಾಳ ಮತ್ತು ತೆರೆದ ಮುಖ ಮಂಟಪವನ್ನು ಹೊಂದಿದೆ. | ಕದಂಬ ನಾಗರ | ಕ್ರಿ.ಶ ೧೧-೧೨ನೇ ಶತಮಾನ | ಶೈವ |
| ಕಲ್ಲೇಶ್ವರ ದೇವಾಲಯ | ಎಲೆಬೇತೂರು ಗ್ರಾಮದ ಮಧ್ಯಭಾಗದಲ್ಲಿದೆ | ಗರ್ಭಗೃಹ, ಅಂತರಾಳ ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ. | ಚಾಲುಕ್ಯ-ಹೊಯ್ಸಳ | ಕ್ರಿ.ಶ ೧೧-೧೨ನೇ ಶತಮಾನ | ಶೈವ |
| ಸೋಮೇಶ್ವರ ದೇವಾಲಯ | ಹಳೆ ಕುಂದವಾಡ ಗ್ರಾಮದ ಮಧ್ಯಭಾಗದಲ್ಲಿದೆ | ಗರ್ಭಗೃಹ, ನವರಂಗ ಸುಖನಾಸಿ, ಮುಖಮಂಟಪ ಹೊಂದಿದೆ. | ಚಾಲುಕ್ಯ-ಹೊಯ್ಸಳ | ಕ್ರಿ.ಶ ೧೨-೧೩ನೇ ಶತಮಾನ | ಶೈವ |
| ಕಲ್ಲೇಶ್ವರ ದೇವಾಲಯ | ಶ್ಯಾಮನೂರು ಗ್ರಾಮದ ಮಧ್ಯಭಾಗದಲ್ಲಿದೆ | ಪುನರ್‌ನಿರ್ಮಾಣ ಮಾಡುತ್ತಿದ್ದಾರೆ | ಚಾಲುಕ್ಯ-ಹೊಯ್ಸಳ | ಕ್ರಿ.ಶ ೧೨-೧೩ನೇ ಶತಮಾನ | ಶೈವ |
| ದುಗ್ಗಮ್ಮ | ದಾವಣಗೆರೆ ಹಳೆಯ ಊರಿನ ಮಧ್ಯಭಾಗದಲ್ಲಿದೆ | ಗರ್ಭಗೃಹ, ನವರಂಗ ಪುನರ್‌ನಿರ್ಮಾಣ ಮಾಡಿದ್ದಾರೆ | ವಿಜಯನಗರೋತ್ತರ | ಆಧುನಿಕ ಶತಮಾನ | ಶಾಕ್ತ |

## ವಕ್ತೃ ವಿವರಗಳು

| ಕ್ರ.ಸಂ. | ಹೆಸರು | ವೃತ್ತಿ | ಸ್ಥಳ | ವಯಸ್ಸು |
|---|---|---|---|---|
| ೧ | ಅನಂದಪ್ಪ | ರೈತ | ಆನೆಕೊಂಡ | 43 |
| ೨ | ಸೀತಮ್ಮ | ಗೃಹಿಣಿ | ಆನೆಕೊಂಡ | 54 |
| ೩ | ರಾಜಣ್ಣ | ಕೂಲಿ | ಆನೆಕೊಂಡ | 38 |
| ೪ | ಅಣ್ಣಪ್ಪ | ಕೂಲಿ | ಎಲೆಬೇತೂರು | 31 |
| ೫ | ವೀರಾಚಾರಿ | ಶಿಕ್ಷಕರು | ಎಲೆಬೇತೂರು | 32 |
| ೬ | ಗುರುಬಸಪ್ಪ | ರೈತ | ಎಲೆಬೇತೂರು | 60 |
| ೭ | ರಾಘವೇಂದ್ರಚಾರಿ | ಸಂಶೋಧಕರು | ದಾವಣಗೆರೆ | 55 |
| ೮ | ಬುರುಡೆಕಟ್ಟೆ ಮಂಜಪ್ಪ | ಶಿಕ್ಷಕರು | ದಾವಣಗೆರೆ | 45 |
| ೯ | ಸಂತೋಷ ಎನ್. ಜಿ | ಉಪನ್ಯಾಸಕರು | ದಾವಣಗೆರೆ | 35 |
| ೧೦ | ರಾಕೇಶ ಬಿ.ಸಿ. | ಉಪನ್ಯಾಸಕರು | ದಾವಣಗೆರೆ | 38 |
| ೧೧ | ಮಂಜುನಾಥ | ಪೇಂಟರ್ | ನಿಟ್ಟುವಳ್ಳಿ | 45 |
| ೧೨ | ಬಸವಕುಮಾರ ಪೂಜರ್ | ಉಪನ್ಯಾಸಕರು | ನಿಟ್ಟುವಳ್ಳಿ | 33 |
| ೧೩ | ಶಿವನಂದಪ್ಪ | ರೈತ | ಕಾಡಜ್ಜಿ | 40 |
| ೧೪ | ಶಿವಪ್ಪ | ಕೂಲಿ | ಕಾಡಜ್ಜಿ | 40 |
| ೧೫ | ಮಂಜಣ್ಣ | ಕೂಲಿ | ಹಳೆಕುಂದುವಾಡ | 45 |
| ೧೬ | ನಾಗರಾಜು | ಶಿಕ್ಷಕೆರು | ಹಳೆಕುಂದುವಾಡ | 30 |
| ೧೭ | ಗುರುಮೂರ್ತಿ | ರೈತ | ಕಡ್ಲೆಬಾಳು | 35 |
| ೧೮ | ಮಂಜುನಾಥ | ರೈತ | ಕಡ್ಲೆಬಾಳು | 40 |
| ೧೯ | ಬಸವರಾಜಪ್ಪ | ರೈತ | ಶಾಮನೂರು | 65 |
| ೨೦ | ನಾಗಣ್ಣ | ಕೂಲಿ | ಶಾಮನೂರು | 40 |
| ೨೧ | ರವಿ | ಪತ್ರಕರ್ತ | ಹದಡಿ | 35 |
| ೨೨ | ಸಿದ್ದೇಶ | ರೈತ | ರಾಂಪುರ | 40 |
| ೨೩ | ರಾಮಪ್ಪ | ರೈತ | ಪುಟ್ನಾಳ್ | 55 |
| ೨೪ | ಹನುಮಂತಪ್ಪ | ವ್ಯಾಪರಿ | ಬೂದಾಳ್ | 63 |
| ೨೫ | ವಿರೂಪಾಕ್ಷಪ್ಪ | ರೈತ | ಅಗಸನಕಟ್ಟೆ | 35 |
| ೨೬ | ರೇವಣಸಿದ್ದಪ್ಪ | ರೈತ | ಅವರಗೊಳ್ಳ | 55 |
| ೨೭ | ಶಿವಮೂರ್ತಿ | ರೈತ | ಅವರಗೊಳ್ಳ | 45 |
| ೨೮ | ಪರಮೇಶ್ವರಪ್ಪ | ಕೂಲಿ | ಕಕ್ಕರಗೊಳ್ಳ | 55 |
| ೨೯ | ಕೊಟ್ರೇಶಪ್ಪ | ರೈತ | ಯರಗುಟ್ಟೆ | 60 |
| ೩೦ | ಗೌರಮ್ಮ | ಗೃಹಣಿ | ಬೆಳವನೂರು | 40 |
| ೩೧ | ಬಾತಿ ಬಸವರಾಜು | ಪ್ರಾಚಾರ್ಯರು | ಬಾತಿ | 65 |

# ನಕ್ಷೆಗಳು

## ಕರ್ನಾಟಕ ನಕ್ಷೆ




ಕೃಪೆ: ಅಂತರಜಾಲ

# ದಾವಣಗೆರೆ ಜಿಲ್ಲಾ ನಕ್ಷೆ




ಕೃಪೆ: ಅಂತರಜಾಲ

# ದಾವಣಗೆರೆ ತಾಲೂಕು ನಕ್ಷೆ




ಕೃಪೆ: ತಾಲೂಕು ಕಛೇರಿ, ದಾವಣಗೆರೆ

## ದಾವಣಗೆರೆ ಕಸಬಾ ನಕ್ಷೆ




ಕೃಪೆ: ತಾಲೂಕು ಕಛೇರಿ, ದಾವಣಗೆರೆ

# ಆನೆಕೊಂಡ ಈಶ್ವರ ದೇವಾಲಯದ ತಲ ವಿನ್ಯಾಸ



## ಎಲೆ ಬೇತೂರಿನ ಕಲ್ಲೇಶ್ವರ ದೇವಾಲಯದ ತಲ ವಿನ್ಯಾಸ





# ದೇವಾಲಯಗಳು



ಈಶ್ವರ ದೇವಾಲಯದ ಮುಖಮಂಟಪ



ಈಶ್ವರ ದೇವಾಲಯದ ಶಿಖರ



ಈಶ್ವರ ದೇವಾಲಯದ ಹೊರನೋಟ



ಈಶ್ವರ ದೇವಾಲಯದ ಕಂಬ



ಈಶ್ವರ ದೇವಾಲಯದ ಕಂಬ

ಈಶ್ವರ ದೇವಾಲಯ, ಆನೆಕೊಂಡ



ಈಶ್ವರ ದೇವಾಲಯದ ಹೊರನೋಟ



ಈಶ್ವರ ದೇವಾಲಯದ ಅಧಿಷ್ಠಾನ



ಈಶ್ವರ ದೇವಾಲಯದ ಗರ್ಭಗೃಹ



ಈಶ್ವರ ದೇವಾಲಯದ ಪಾರ್ಶ್ವನೋಟ

## ಈಶ್ವರ ದೇವಾಲಯ, ಆವರಗೊಳ್ಳ



ಕಲ್ಲೇಶ್ವರ ದೇವಾಲಯದ ಮುಂಭಾಗದ ನೋಟ



ಕಲ್ಲೇಶ್ವರ ದೇವಾಲಯದ ಶಿಖರ



ಕಲ್ಲೇಶ್ವರ ದೇವಾಲಯದ ಗರ್ಭಗೃಹ



ಕಲ್ಲೇಶ್ವರ ದೇವಾಲಯದ ಪಾರ್ಶ್ವನೋಟ



ಕಲ್ಲೇಶ್ವರ ದೇವಾಲಯದ ಕಂಬಗಳು

## ಕಲ್ಲೇಶ್ವರ ದೇವಾಲಯ, ಎಲೆಬೇತೂರು



ದುರುಗಮ್ಮ ದೇವಾಲಯ
ದಾವಣಗೆರೆ



ಆಂಜನೇಯ ದೇವಾಲಯ
ಶಾಮನೂರ



ಜಿಯಾನೋ: ಕ್ರೈಸ್ತ ದೇವಾಲಯ
ದಾವಣಗೆರೆ



ಹಜರತ್ ಸೈಯದ್ ಖಡಕ್ ಪಾವರಿ
ದಾವಣಗೆರೆ

# ಮೂರ್ತಿ ಶಿಲ್ಪಗಳು



ಸರಸ್ವತಿಶಿಲ್ಪ, ಎಲೆಬೇತೂರು



ನಾಗಶಿಲ್ಪ, ಎಲೆಬೇತೂರು



ಭೈರವಿಶಿಲ್ಪ, ಕಾಡ್ಲೆಬಾಳು



ಕಾರ್ತಿಕೇಯಶಿಲ್ಪ, ಎಲೆಬೇತೂರು



ವಿಷ್ಣುಶಿಲ್ಪ, ಹಳೇ ಕುಂದವಾಡ



ಶಿವಲಿಂಗಶಿಲ್ಪ, ವಿಷ್ಣುಶಿಲ್ಪ, ಆನೆಕೊಂಡ



ಸರಸ್ವತಿಶಿಲ್ಪ, ಹಳೇ ಕುಂದವಾಡ



ವಿಷ್ಣುಶಿಲ್ಪ, ಎಲೆಬೇತೂರು



ಶಿವಲಿಂಗ, ಆನೆಕೊಂಡ



ನಂದಿ, ಆನೆಕೊಂಡ



ಗಣೇಶ



ಬ್ರಹ್ಮ, ಶಾಮನೂರು



ತೀರ್ಥಂಕರು, ಎಲೆಬೇತೂರು



ಮಹಾವೀರ, ಶಾಮನೂರು



ದುರುಗಮ್ಮ, ದಾವಣಗೆರೆ



ಮಹಿಶಾಸುರ ಮರ್ದಿನಿ, ದಾವಣಗೆರೆ

# ವೀರಗಲ್ಲುಗಳು ಮತ್ತು ಶಾಸನಗಳು



ವೀರಗಲ್ಲು, ಹಳೇ ಕುಂದವಾಡ



ವೀರಗಲ್ಲುಗಳು, ಎಲೆಬೇತೂರು



ವೀರಗಲ್ಲು, ಬಾತಿ



ವೀರಗಲ್ಲು, ಬಾತಿ



ವೀರಗಲ್ಲು, ಶ್ಯಾಮನೂರು



ವೀರಗಲ್ಲು, ಶ್ಯಾಮನೂರು



ವೀರಗಲ್ಲು, ಕಡ್ಲೆಬಾಳು



ವೀರಗಲ್ಲು, ಆವರಗೊಳ್ಳ



ಸೋಮೇಶ್ವರ ದೇವಾಲಯದ ಗರ್ಭಗೃಹ



ಜೈನಮಂದಿರ, ದಾವಣಗೆರೆ



ಜೈನ ಮಂದಿರದ ಒಳನೋಟ



ಈಶ್ವರ ದೇವಾಲಯದ ಮುಂಭಾಗದನೋಟ, ಆನೆಕೊಂಡ

